೪ ತನಗೆ ನಿಯಮಿಸಿಕೊಟ್ಟ ಕೆಲಸವು ನಿಯಮಿಸಿದ ವೇಳೆಯಲ್ಲಿ ಆರೋಗ್ಯದ ಅಥವಾ ಮತ್ತಾವ ಕಾರಣದಿಂದಾದರೂ ಆಗುವಂತಿಲ್ಲದಿದ್ದರೆ ಅದರ ವಿಷಯವಾಗಿ ವಿನಯದಿಂದ ಅಧಿಕಾರಿಗೆ ತಿಳಿಸಬೇಕು; ಪುನಃ ಕೆಲಸವನ್ನು ಮಾಡಲು ಹೇಳಿದರೆ ಸಾಧ್ಯವಿದ್ದಷ್ಟು ಮಾಡಲು ಯತ್ನಿಸಬೇಕು, ದುಃಖವಾದರೆ ಅದನ್ನು ಸಹಿಸಿಕೊಳ್ಳಬೇಕು.

೫ ಡಾಕ್ಟರರು ಆರೋಗ್ಯವನ್ನು ಪರೀಕ್ಷಿಸುವಾಗ ಸತ್ಯಾಗ್ರಹಿಯು ತನ್ನಲ್ಲಿದ್ದ ರೋಗಗಳನ್ನು ಬಚ್ಚಿಡದೆ ಹೇಳಬೇಕು. ಅಂಟುರೋಗವಿದ್ದರೆ ನಾಚಿಕೆಯಿಂದ ಅದನ್ನು ಬಚ್ಚಿಟ್ಟುಕೊಳ್ಳಲಾಗದು.

೬ ತನ್ನ ಧರ್ಮ ಅಥವಾ ನಿಯಮಕ್ಕೆ ಕುಂದು ತರುವಂಥ ಔಷಧೋಪಚಾರವನ್ನು ಪಡೆಯಲು ಕೈದಿಯು ಬದ್ಧನಲ್ಲ. ಆದರೆ ಅನ್ಯತರದ ಔಷಧೋಪಚಾರವನ್ನು ಅಧಿಕಾರವಾಣಿಯಿಂದ ಬೇಡಲಾರನು. ಮೈಲಿಯನ್ನು ಚುಚ್ಚಿಸಿಕೊಳ್ಳದಿರುವದು ಮುಂತಾದವುಗಳಿಗಾಗಿ ಶಿಕ್ಷೆಯನ್ನು ಅನುಭವಿಸಬೇಕಾಗುವದು. ನಿಜವಾಗಿಯೂ ಇಂತಹ ಔಷಧೋಪಚಾರದ ಬಗ್ಗೆ ಧಾರ್ಮಿಕ ಆಗ್ರಹವು ಇದ್ದರೆ ಮಾತ್ರ ಶಿಕ್ಷೆಗೆ ಗುರಿಯಾಗಬೇಕು; ಶಿಕ್ಷಿಸಿಕೊಳ್ಳುವದಕ್ಕೆಂದು ಮಾತ್ರ ಸುಮ್ಮಸುಮ್ಮನೆ ತನ್ನ ನಿಯಮಕ್ಕೆ ಧಾರ್ಮಿಕ ಸ್ವರೂಪವನ್ನು ಕೊಟ್ಟು ಅದಕ್ಕಾಗಿ ಆಗ್ರಹ ಹಿಡಿಯಬಾರದು.

೭ ತನ್ನ ಆರೋಗ್ಯಸಂಬಂಧವಾಗಿ ಏನಾದರೂ ಹೇಳಬೇಕಾಗಿದ್ದರ ಮತ್ತು ತನಗೆ ಯಾವದಾದರೂ ಅನುಕೂಲತೆ ಬೇಕಾಗಿದ್ದರೆ ಅದನ್ನು ಒದಗಿಸಿಕೊಡಬಲ್ಲ ಯೋಗ್ಯ ಅಧಿಕಾರಿಗೆ ತಿಳಿಸಬೇಕು. ಅಧಿಕಾರಿಯು ಅತ್ತ ಕಡೆ ಸರಿಯಾಗಿ ಲಕ್ಷಗೊಡದಿದ್ದರೆ ಅದೂ ಸತ್ಯಾಗ್ರಹದಲ್ಲಿ ಆಗತಕ್ಕ ಕಷ್ಟಗಳಲ್ಲಿ ಒಂದೆಂದು ತಿಳಿದು ಅದನ್ನು ಸಹಿಸಬೇಕು. ತನಗೆ ಬೇಕಾದ ಅನುಕೂಲತೆಯನ್ನು ಕಳವಿನಿಂದ ತರಿಸಿಕೊಂಡು ತನ್ನ ಆರೋಗ್ಯವನ್ನು ಸುಧಾರಿಸಿಕೊಳ್ಳುವ ಯತ್ನವನ್ನು ಸತ್ಯಾಗ್ರಹಿಯು ಮಾಡಬಾರದು. ಒಂದು ವೇಳೆ ಹೀಗೆ ಮಾಡಿದರೆ ಅವನು ಬೇಡಿದ ಬೇಡಿಕೆಗಳು ಅಯೋಗ್ಯವಿದ್ದುವೆಂದು ಅಧಿಕಾರಿಯು ತಿಳಿದುಕೊಳ್ಳುವನು.

೮ ಸೆರೆಮನೆಯಲ್ಲಿಯೂ ಪಾಲಿಸಲೇಬೇಕಾದಂಥ ಯಾವದಾದರೂ ವ್ರತ-ನಿಯಮವಿದ್ದರೆ ಅದನ್ನು ಸತ್ಯಾಗ್ರಹಿಯು ಯೋಗ್ಯ ಅಧಿಕಾರಿಗೆ ಅರುಹಬೇಕು ಮತ್ತು ಅದಕ್ಕಾಗಿ ಯೋಗ್ಯ ಅನುಕೂಲತೆಗಳನ್ನು ಬೇಡಬೇಕು.

ವ್ರತೋಪಾಸಕನು ತನ್ನ ವ್ರತವನ್ನು ಪಾಲಿಸುವದಕ್ಕಾಗಿ ತಗಲುವ ವೆಚ್ಚ ವನ್ನು ಸರಕಾರದವರೆ ಕೊಡಬೇಕೆಂಬ ಆಗ್ರಹ ಹಿಡಿಯಬಾರದು. ತನ್ನ ವೆಚ್ಚದಿಂದ ವ್ರತವನ್ನು ಪಾಲಿಸಲು ಅಪ್ಪಣೆ ದೊರೆತರೆ ಅಷ್ಟರಿಂದಲೆ ಸಂತುಷ್ಟನಾಗಬೇಕು. ಒಂದು ವೇಳೆ ಅಪ್ಪಣೆಯು ದೊರೆಯದೆ ವ್ರತವನ್ನು ಪಾಲಿಸಲು ಕಷ್ಟವಾದರೆ ಅದನ್ನು ಸಹಿಸಿಕೊಳ್ಳಬೇಕು.

೯ ಸೆರೆಮನೆಯಲ್ಲಿಯೆ ಯಾವದಾದರೂ ವಿಶೇಷತರದ ವ್ರತನಿಯಮ ವನ್ನು ಸತ್ಯಾಗ್ರಹಿಯು ಹಿಡಿಯಬಾರದು.

೧೦ ಕೈದಿಯು ಹೊಡೆತ ಅಥವಾ ಬೈಗಳನ್ನು ತಿನ್ನಬೇಕೆಂದು ವಿಧಿಯಿಲ್ಲ. ಎಂಜಲು, ತಂಗಳು, ಹೊಲಸಾದ, ಅರೆಬೆಂದ ಅಥವಾ ಹುಳಗಳಿದ್ದ ಆಹಾರ ವನ್ನು ತಿನ್ನಬೇಕೆಂಬ ನಿಯಮವೂ ಇಲ್ಲ. ಆದ್ದರಿಂದ ಇಂಥ ಆಹಾರವನ್ನು ಕೊಟ್ಟರೆ, ಹೊಡೆದರೆ ಬೈದರೆ ಸಹಿಸಿಕೊಳ್ಳಬಾರದು. ಹೊಡೆದ ಬಗ್ಗೆ ಬೈದ ಬಗ್ಗೆ ಫಿರ್ಯಾದಿಯನ್ನು ಮಾಡಬೇಕು. ಅದನ್ನು ಕೇಳದೆ ಪುನಃ ಪುನಃ ಹೊಡೆಯಲಾರಂಭಿಸಿದರೆ, ಬೈಯತೊಡಗಿದರೆ, ಶಿಕ್ಷೆ ಕೊಟ್ಟರೆ ಎಲ್ಲವನ್ನೂ ಸಹಿಸಬೇಕು, ಆದರೆ ಕೆಲಸ ಮಾಡಲು ಒಲ್ಲೆನ್ನಬಾರದು; ಅವಶ್ಯಕತೆಯು ಕಂಡರೆ ಉಪವಾಸವನ್ನು ಮಾಡಬೇಕು.

೧೧ ತಿನ್ನಲಾಗದಂಥ ಆಹಾರವನ್ನು ಸತ್ಯಾಗ್ರಹಿಯು ಸ್ವೀಕರಿಸಬಾರದು, ಇದಕ್ಕಾಗಿ ಶಿಕ್ಷೆಯಾದರೆ ಸಹಿಸಿಕೊಳ್ಳಬೇಕು.

೧೨ ಸತ್ಯಾಗ್ರಹಿಯು ತನಗೆ ಮತ್ತು ತನ್ನ ವರ್ಗದ ಕೈದಿಗಳ ಸಲುವಾಗಿ ಯಷ್ಟೆ ಸೆರೆಮನೆಯ ನಿಯಮಗಳಲ್ಲಿ ಸುಧಾರಣೆಗಳನ್ನು ಮಾಡುವದಕ್ಕಾಗಿ, ಅನುಕೂಲತೆಗಳನ್ನು ಒದಗಿಸಿಕೊಳ್ಳುವಕ್ಕಾಗಿ ಸೆರೆಮನೆಯಲ್ಲಿ ಸತ್ಯಾಗ್ರಹ ವನ್ನು ಹೂಡಬಾರದು. ಕೇವಲ ತನ್ನ ಮತ್ತು ತನ್ನ ವರ್ಗದ ಕೈದಿಗಳ ಮೇಲೆ ಅಷ್ಟೇ ಅನ್ಯಾಯವಾಗುತ್ತಿದ್ದರೆ ಸತ್ಯಾಗ್ರಹವನ್ನು ಹೂಡಬಹುದು. ಇಡೀ ಸೆರೆಮನೆಯ ಆಡಳಿತದಲ್ಲಿಯೆ ಸುಧಾರಣೆ ಮಾಡುವದು ಅವಶ್ಯವೆಂದು ಕಂಡುಬಂದರೆ ಮತ್ತು ಅದಕ್ಕೆ ತಕ್ಕ ಪರಿಸ್ಥಿತಿಯು ಇದ್ದರೆ ಮಾತ್ರ ಸೆರೆಮನೆ ಯಲ್ಲಿ ಸತ್ಯಾಗ್ರಹವನ್ನು ಮಾಡಬಹುದು.

೧೩ ಸೆರೆಮನೆಯ ರಾಜ್ಯವು ವ್ಯವಸ್ಥಿತವಾಗಿ ನಡೆಯುವಂತೆ ವರ್ತಿಸುವದು, ಸಹಕಾರವನ್ನೀಯುವದು ಸತ್ಯಾಗ್ರಹದ ಸಿದ್ಧಾಂತಕ್ಕೆ ವಿರೋಧವಾಗಿರುವ ದಿಲ್ಲ. ಆ ಬಗ್ಗೆ ಅಧಿಕಾರಿಗಳಿಗೆ ಎಲ್ಲ ರೀತಿಯಿಂದ ಸಹಾಯ ಮಾಡುವದು

ಸತ್ಯಾಗ್ರಹಿಯ ಧರ್ಮವು. ಆದರೆ ಸತ್ಯಾಗ್ರಹಿಯು ವಾರ್ಡರ ಮತ್ತು ವಾಚ-ಮನ್ನರ ಅಧಿಕಾರಗಳನ್ನು ಸ್ವೀಕರಿಸಬಾರದು.

೧೪ ಬಿಡುವಿನ ದಿನಗಳನ್ನು ಹೆಚ್ಚು ಮಾಡಿಸಿಕೊಳ್ಳಲು ಸತ್ಯಾಗ್ರಹಿಯು ಆಶೆಪಡಬಾರದು.

೧೫ ಸ್ವರಾಜ್ಯ ಸಂಪಾದನೆಯ ಸಲುವಾಗಿ ಹೂಡಿದ ಸತ್ಯಾಗ್ರಹದ ಉದ್ದೇಶವು ಇಡೀ ರಾಜ್ಯದ ಆಳಿಕೆಯಲ್ಲಿಯೆ ಸಂಪೂರ್ಣ ಬದಲಾವಣೆ ಮಾಡು ವದು ಇದೆ. ಆದ್ದರಿಂದ ಸೆರೆಮನೆಯ ಸುಧಾರಣೆಗಾಗಿ ಸೆರೆಮನೆಯಲ್ಲಿ ಒಂದು ಸ್ವತಂತ್ರವಾದ ಸತ್ಯಾಗ್ರಹ ಯುದ್ಧವನ್ನು ಹೂಡಬಾರದು. ಆದರೆ ಸೆರೆಮನೆ ಯಲ್ಲಿ ಅಕ್ಷಮ್ಯ, ಅಮಾನುಷೀ ವರ್ತನೆ ಇದ್ದರೆ, ನಿಯಮಗಳಿದ್ದರೆ ಅವುಗಳ ವಿರುದ್ಧವಾಗಿ ಪ್ರಸಂಗ ಬಂದರೆ ಸತ್ಯಾಗ್ರಹ ಯುದ್ಧವನ್ನು ಹೂಡಬೇಕು.

## ೧೩ ಸತ್ಯಾಗ್ರಹಿಯ ನಿಯಮಾವಲಿ

ಸ್ವಲ್ಪ ಪುನರುಕ್ತಿಯ ದೋಷವಾದರೂ ತಾರೀಖು ೨೩-೨-೧೯೩೦ ರ 'ನವಜೀವನ' ದಲ್ಲಿ ಗಾಂಧೀಜಿಯವರು ಕೊಟ್ಟಿರುವ 'ಸತ್ಯಾಗ್ರಹಿಯ ನಿಯಮಾವಲಿ' ಇಲ್ಲಿ ಕೊಡಲಾಗಿದೆ. ಅದರಿಂದ ಈ ಖಂಡದ ಯೋಗ್ಯ ಪೂರ್ತಿಯಾಗುವದಲ್ಲದೆ ಈ ಖಂಡದ ಅತ್ಯಂತ ಸುಂದರವಾದ ಉಪಸಂಹಾ-ರವೂ ಆಗುವದು :

೧ ಸತ್ಯಾಗ್ರಹವೆಂದರೆ ಸತ್ಯದ ಬಗ್ಗೆ ಆಗ್ರಹ ಹಿಡಿಯುವದು. ಈ ಆಗ್ರಹದಿಂದ ಮನುಷ್ಯನಿಗೆ ಅತುಲ ಬಲವು ಬರುವದು. ಈ ಬಲವು ಸತ್ಯಾ-ಗ್ರಹದ ಬಲವು ಎಂದು ತಿಳಿಯುವೆವು.

೨ ಸತ್ಯದ ಬಗ್ಗೆ ನಮ್ಮ ಆಗ್ರಹವು ನಿಜವಾಗಿಯೂ ಇದ್ದರೆ ಅದನ್ನು ತಂದೆ-ತಾಯಿ, ಸ್ತ್ರೀ-ಪುರುಷ, ರಾಜ-ಪ್ರಜೆ ಮತ್ತು ಕೊನೆಯಲ್ಲಿ ಇಡೀ ಜಗತ್ತು ಎದುರಾದರೂ ನಾವು ನಡೆಸಬೇಕಾಗುವದು. ಅದೇ ನಿಜವಾದ ಸತ್ಯಾಗ್ರಹ.

೩ ಇಷ್ಟು ವ್ಯಾಪಕ ಆಗ್ರಹ ಹಿಡಿಯುವಾಗ ಸ್ವಜನರು ಅಥವಾ ಪರ ಜನರು, ಬಾಲಕರು ಅಥವಾ ಮುದುಕರು ಮತ್ತು ಸ್ತ್ರೀಯರು ಅಥವಾ ಪುರುಷರು ಎಂಬ ಭೇದಮಾಡಲು ಬರುವದಿಲ್ಲ. ಯಾರ ವಿರುದ್ಧವಾಗಿಯೂ

ಶಾರೀರಿಕ ಬಲವನ್ನು ಉಪಯೋಗಿಸಬಾರದು. ಶರೀರದ ಬಲವೊಂದನ್ನು ಬಿಟ್ಟರೆ ಇನ್ನು ಉಳಿದುದು ಅಹಿಂಸೆಯ ಬಲವು, ಪ್ರೇಮದ ಬಲವು. ಈ ಬಲಕ್ಕೆ ಆತ್ಮಬಲವೆನ್ನುವರು.

೪ ಪ್ರೇಮದ ಬಲದಿಂದ ಅನ್ಯರಿಗೆ ದುಃಖವಾಗುವದಿಲ್ಲ, ತನಗೆಯೆ ಆಗುವದು. ಆದ್ದರಿಂದ ಮರಣಪರ್ಯಂತರದ ಎಲ್ಲ ಕಷ್ಟಗಳನ್ನು ನಗುಮೊಗದಿಂದ ಸಹಿಸುವ ಶಕ್ತಿಯು ಸತ್ಯಾಗ್ರಹಿಯಲ್ಲಿರಬೇಕು.

೫ ಪ್ರತಿಪಕ್ಷಿಯು ಬಹಳವಾಗಿ ವಿರೋಧಿಸುತ್ತಿದ್ದರೂ ಸತ್ಯಾಗ್ರಹಿಯು ಮನ, ವಚನ, ಮತ್ತು ಕಾಯದಿಂದ ಅವನ ಮತ್ತು ಅವನ ಪಕ್ಷದ ಯಾವದೆ ವ್ಯಕ್ತಿಯ ಅಹಿತವನ್ನು ಬಯಸುವದೂ ಇಲ್ಲ, ಮಾಡುವದೂ ಇಲ್ಲ. ಇಂತಹ ವಿಚಾರಗಳಿಂದಲೆ ಅಸಹಕಾರ, ಸವಿನಯ ಕಾಯಿದೆಭಂಗ ಮೊದಲಾದವುಗಳು ಹುಟ್ಟುತ್ತವೆ.

೬ ಸತ್ಯಾಗ್ರಹದ ಈ ಉತ್ಪತ್ತಿಯನ್ನು ನೆನಪಿನಲ್ಲಿಟ್ಟವರಿಗೆ ಕೆಳಗಿನ ನಿಯಮಗಳು ಸುಲಭವಾಗಿ ತಿಳಿಯುವವು :

೧) ಸತ್ಯಾಗ್ರಹಿಯು ಯಾರೊಡನೆಯೂ ಕೋಪಿಸಿಕೊಳ್ಳುವದಿಲ್ಲ.

೨) ವಿರೋಧಿಗಳ ಕ್ರೋಧವನ್ನು ಸಹಿಸುವನು.

೩) ತನ್ನ ಕೋಪವನ್ನು ಸಹಿಸುತ್ತ ವಿರೋಧಿಯ ಹೊಡತಗಳನ್ನು ಸಹಿಸುವನು. ಆದರೆ ತಿರುಗಿ ಅವನಿಗೆ ಹೊಡೆಯುವದಿಲ್ಲ. ಅವನು ಸಿಟ್ಟಿನ ಭರದಲ್ಲಿ ಮಾಡಿದ ಯೋಗ್ಯ ಅಥವಾ ಅಯೋಗ್ಯ ಹುಕುಮನ್ನು ಹೆದರಿಕೆಯಿಂದಾಗಲಿ ಹೊಡೆತಗಳಿಂದಾಗಲಿ ಒಪ್ಪಿ ವಿರೋಧಿಗೆ ವಶನಾಗುವದಿಲ್ಲ.

೪) ಪೋಲೀಸರು ಹಿಡಿಯಲು ಬಂದರೆ ಸಂತೋಷದಿಂದ ಅವರ ವಶಕ್ಕೆ ಹೋಗುವನು. ತನ್ನ ವಸ್ತುಗಳನ್ನು ಜಪ್ತಮಾಡಲು ಬಂದರೆ ಆನಂದದಿಂದ ಜಪ್ತಿಮಾಡಲು ಕೊಡುವನು.

೫) ಎರಡನೆಯವರ ಆಸ್ತಿಯ ರಕ್ಷಣೆ ಮಾಡುತ್ತಿರುವಾಗ ಅದರ ರಕ್ಷಣೆ ಮಾಡುವ ಹಕ್ಕು ಅವನಿಗಿರುವದು. ಅದನ್ನು ಅವನು ಜೀವಹೋಗುವವರೆಗೆ ಬಿಟ್ಟುಕೊಡುವದಿಲ್ಲ. ಅದನ್ನು ವಶಪಡಿಸಿಕೊಳ್ಳಲು ಬಂದವನನ್ನು ಹೊಡೆಯುವದಿಲ್ಲ.

೬) ಹೊಡೆಯುವದೂ ಇಲ್ಲ ಅಂದರೆ ಬೈಯುವದೂ ಇಲ್ಲ.

೭) ಸತ್ಯಾಗ್ರಹಿಯು ವಿರೋಧಿಯ ಅಪಮಾನವನ್ನು ಮಾಡುವದಿಲ್ಲ. ಈಗ ದೇಶದಲ್ಲಿ ಆಗುತ್ತಿರುವ ಎಷ್ಟೋ ಜಯಘೋಷಗಳು ಹಿಂಸಾತ್ಮಕವಿರುವವು. ಸತ್ಯಾಗ್ರಹಿಯು ಅವನ್ನು ಬಿಡುವನು.

೮) ಸತ್ಯಾಗ್ರಹಿಯು ಬ್ರಿಟಿಶರ ಧ್ವಜಕ್ಕೆ ವಂದನೆ ಮಾಡುವದಿಲ್ಲ. ಆದರೆ ಅವನು ಅದರ ಅಪಮಾನ ಮಾಡುವದಿಲ್ಲ. ಅಧಿಕಾರಿಗಳ ಮತ್ತು ಇಂಗ್ಲೀಷು ಜನರ ಅಪಮಾನವನ್ನು ಮಾಡುವದಿಲ್ಲ.

೯) ಸರಕಾರದೊಡನೆ ಹೋರಾಟ ನಡೆದಾಗ ಸಹ ಇಂಗ್ಲೀಷು ಜನರ ಮತ್ತು ಅಧಿಕಾರಿಗಳ ಅಪಮಾನವನ್ನು ಯಾರಾದರೂ ಮಾಡಲು ಬಂದರೆ ಅಥವಾ ಅವರನ್ನು ಯಾರಾದರೂ ಹೊಡೆಯಹೋದರೆ ಸತ್ಯಾಗ್ರಹಿಯು ತನ್ನ ಜೀವದ ಹಂಗುದೊರೆದು ಅವರ ರಕ್ಷಣೆ ಮಾಡುವನು.

**ಸೆರೆಮನೆಯ ವಿಷಯವಾಗಿ :**

೧೦) ಸತ್ಯಾಗ್ರಹಿಯು ಸೆರೆಮನೆಯಲ್ಲಿರುವಾಗ ತನ್ನ ಮಾನಕ್ಕೆ ಕುಂದು ತರದಿರುವಂಥ ಎಲ್ಲ ಸೆರೆಮನೆಯ ನಿಯಮಗಳನ್ನು ಪಾಲಿಸುವನು. ಅಧಿಕಾರಿಗಳೊಡನೆ ವಿವೇಕತನದಿಂದ, ವಿನಯದಿಂದ ವರ್ತಿಸುವನು. ಉದಾಹರಣಾರ್ಥ: ಸತ್ಯಾಗ್ರಹಿಯು ಅಧಿಕಾರಿಗಳಿಗೆ ನಮಸ್ಕಾರ ಮಾಡುವನು. ಆದರೆ ಅವನಿಗೆ ನೆಲಕ್ಕೆ ಮೂಗು ತಿಕ್ಕಲು ಹೇಳಿದರೆ, ತಿಕ್ಕಲಾರನು. 'ಸರಕಾರಕೀ ಜಯ' ಎನ್ನಲು ಹೇಳಿದರೆ ಹಾಗೆನ್ನಲಾರನು. ಯಾವದಾದರೂ ಧರ್ಮದ ಕಟ್ಟು ಬಾಧೆಗಳಿಲ್ಲದಿದ್ದರೆ ಸೆರೆಮನೆಯ ಸ್ವಚ್ಛವಾದ ಆಹಾರವನ್ನು ತೆಗೆದುಕೊಳ್ಳುವನು. ಆದರೆ ಅಪಕ್ವ, ಕೊಳೆತ, ಹೊಲಸು ಪಾತ್ರೆಯಲ್ಲಿ ಬಡಿಸಿದ, ಅಪಮಾನ ಮಾಡುವ ಉದ್ದೇಶದಿಂದ ಕೊಟ್ಟ ಆಹಾರ ತೆಗೆದುಕೊಳ್ಳುವದಿಲ್ಲ.

೧೧) ಸತ್ಯಾಗ್ರಹಿಯು ಕೊಲೆಮಾಡಿ ಸೆರೆಮನೆಗೆ ಬಂದ ಕೈದಿಗಳ ಮತ್ತು ತನ್ನ ನಡುವೆ ಭೇದಮಾಡುವದಿಲ್ಲ. ಅವರಿಗಿಂತಲೂ ತಾನು ಉಚ್ಚನೆಂದು ತಿಳಿದುಕೊಂಡು, ಅಧಿಕಾರಿಗಳಿಗೆ ಹಾಗೆ ಹೇಳಿ ತನಗೆ ಹೆಚ್ಚಿನ ಅನುಕೂಲತೆಗಳನ್ನು ಬೇಡುವದಿಲ್ಲ. ಶರೀರದ ಮತ್ತು ಆತ್ಮದ ಬಗ್ಗೆ ಅವಶ್ಯವಾಗಿ ಬೇಕಾಗುವ ವಸ್ತುಗಳನ್ನು ಬೇಡಲು ಎಲ್ಲರಿಗೂ ಅಧಿಕಾರವುಂಟು.

೧೨) ಯಾವ ಅನುಕೂಲತೆಗಳು ಸಿಕ್ಕದಿದ್ದರೆ ಮಾನಹಾನಿಯಾಗುವದಿಲ್ಲವೊ ಅಂಥವು ಸಿಕ್ಕದಿದ್ದರೂ ಸತ್ಯಾಗ್ರಹಿಯು ಉಪವಾಸಾದಿಗಳನ್ನು ಮಾಡುವದಿಲ್ಲ.

**ದಲದ ವಿಷಯುವಾಗಿ :**

೧೩) ತನ್ನ ಗುಂಪಿನ ಅಧಿಕಾರಿಯು ಹೊರಡಿಸಿದ ಎಲ್ಲ ಹುಕುಮುಗಳು ತನ್ನ ಮನಸಿಗೆ ಬರಲಿ ಅಥವಾ ಬರದಿರಲಿ ಅವನ್ನು ಸತ್ಯಾಗ್ರಹಿಯು ಸಂತೋಷದಿಂದ ಪಾಲಿಸುವನು.

೧೪) ಹುಕುಮು ಅಪಮಾನಕಾರಿಯಾದುದು, ದ್ವೇಷಯುಕ್ತವಾದುದು ಮತ್ತು ಮೂರ್ಖತನದ್ದು ಇರುವದೆಂದು ಎನಿಸಿದರೂ ಅದನ್ನು ಮೊದಲು ಪಾಲಿಸಿ ಆ ಮೇಲೆ ಅದರ ಬಗ್ಗೆ ಮೇಲಿನ ಅಧಿಕಾರಿಗಳಿಗೆ ತಿಳಿಸುವನು. ದಲದಲ್ಲಿ ಸೇರುವ ಮೊದಲು ಆ ದಲವು ಯೋಗ್ಯವಿರುವದೊ ಇಲ್ಲವೊ ಎಂಬದನ್ನು ವಿಚಾರ ಮಾಡುವ ಹಕ್ಕು ಅವನಿಗೆ ಇರುವದು. ಒಂದು ಸಲ ಸೇರಿದ ಬಳಿಕ ಅದರ ಕಟುತರವಾದ ಮತ್ತು ಸಿಹಿಯಾದ ನಿಯಮುಗಳನ್ನೆಲ್ಲ ಪಾಲಿಸುವದು ಅವನ ಧರ್ಮವಾಗುವದು. ದಲದಲ್ಲಿದ್ದುಕೊಂಡು ನಿಯಮುಗಳನ್ನು ಮುರಿಯಲು ಅವನಿಗೆ ಅಧಿಕಾರವಿರುವದಿಲ್ಲ.

೧೫) ಸತ್ಯಾಗ್ರಹಿಯು ತನ್ನನ್ನು ಅವಲಂಬಿಸಿಕೊಂಡಿರುವವರ ಹೊಟ್ಟೆಯ ಬಗ್ಗೆ ಯಾರಿಂದಲೂ ಏನೂ ಅಪೇಕ್ಷಿಸುವದಿಲ್ಲ. ಯಾವನಾದರೊಬ್ಬ ಸತ್ಯಾಗ್ರಹಿಯನ್ನು ಅವಲಂಬಿಸಿಕೊಂಡವರ ಉದರಪೋಷಣೆಯ ವ್ಯವಸ್ಥೆ ಆದರೆ ಅದು ಅನಪೇಕ್ಷಿತವಾಗಿ ಆದದ್ದೆಂದು ತಿಳಿಯುವನು. ಸತ್ಯಾಗ್ರಹಿಯು ತನ್ನ ಆಶ್ರಿತರನ್ನು ಈಶ್ವರನ ಚರಣದಲ್ಲಿ ಅರ್ಪಿಸುವನು. ಎಲ್ಲಿ ಶಾರೀರಕ ಬಲದ ಯುದ್ಧಗಳಾಗುವವೊ ಅಲ್ಲಿ ಸಾವಿರಾರು ಜನರು ಭಾಗವಹಿಸುವರು. ಅಂಥ ಕಡೆಗಳಲ್ಲಿಯೂ ಯಾರೂ ಯಾರನ್ನೂ ಅವಲಂಬಿಸಿಕೊಂಡಿರುವದಿಲ್ಲ. ಸತ್ಯಾಗ್ರಹೀ ಯುದ್ಧದ ವಿಷಯ ಕೇಳಬೇಕಾದುದೇನು ? ಇಂಥವರನ್ನು ಈಶ್ವರನು ಹಸಿವೆಯಿಂದ ಬಳಲಿಸಿ ಕೊಲ್ಲುವದಿಲ್ಲವೆಂದು ಸರ್ವರ ಅನುಭವಕ್ಕೆ ಬಂದಿದೆ.

**ಜಾತಿಜಾತಿಗಳ ನಡುವಿನ ಜಗಳದಲ್ಲಿ :**

೧೬) ಸತ್ಯಾಗ್ರಹಿಯು ಜಾತಿಯ ಜಗಳ ಮತ್ತು ತಿಕ್ಕಾಟಕ್ಕೆ ತಿಳಿದೂ ತಿಳಿದೂ ಕಾರಣನಾಗುವದಿಲ್ಲ.

೧೭) ಜಾತಿಯ ಜಗಳದಲ್ಲಿ ಯಾವ ಪಕ್ಷದ ಪರವಾಗಿಯೂ ಭಾಗ ತೆಗೆದುಕೊಳ್ಳುವದಿಲ್ಲ. ಯಾವ ಪಕ್ಷವು ನ್ಯಾಯುವಾದದ್ದೊ ಅದಕ್ಕೆ ಸತ್ಯಾಗ್ರಹಿಯು ಸಹಾಯ ಮಾಡುವನು. ತಾನು ಹಿಂದೂ ಧರ್ಮದವನಾಗಿದ್ದರೆ ಮುಸಲ್ಮಾನ ಮುಂತಾದ ಇತರ ಧರ್ಮೀಯರ ಬಗ್ಗೆ ತನ್ನ ಉದಾರವೃತ್ತಿಯನ್ನು ತೋರಿಸು

ವನು. ಹಿಂದೂಗಳು ಅನ್ಯ ಜಾತಿಗಳ ಮೇಲೆ ಆಕ್ರಮಣ ಮಾಡಿದರೆ ಅವರನ್ನು ತನ್ನ ಜೀವದ ಹಂಗುದೊರೆದು ಕಾಪಾಡುವನು. ಹಿಂದೂಗಳ ಮೇಲೆ ಮುಸಲ್ಮಾನರು ಮೊದಲಾದವರು ಆಕ್ರಮಣ ಮಾಡಿದರೆ ಅವರನ್ನುಳಿಸಲು ಪ್ರಾಣವನ್ನಾದರೂ ಕೊಡುವನು. ಆದರೆ ಪ್ರತಿಯಾಗಿ ಹೂಡಿದ ಹೋರಾಟದಲ್ಲಿ ಎಂದೂ ಭಾಗತೆಗೆದುಕೊಳ್ಳುವದಿಲ್ಲ.

೧೮) ಜಾತಿಯ ಜಗಳಗಳಿಂದ ಆದಷ್ಟು ದೂರ ಇರಲು ಯತ್ನಿಸುವನು.

೧೯) ಸತ್ಯಾಗ್ರಹಿಯು ಯಾವ ಜಾತಿಯವರ ಮನಸ್ಸನ್ನೂ ನೋಯಿಸದಂತೆ ಮೆರವಣಿಗೆಯನ್ನು ಹೊರಡಿಸಬೇಕು. ಯಾವದೆ ಜಾತಿಯ ಮನಸ್ಸನ್ನು ನೋಯಿಸಬೇಕೆಂದು ಹೊರಡಿಸಿದ ಮೆರವಣಿಗೆಯಲ್ಲಿ ಭಾಗತೆಗೆದುಕೊಳ್ಳಕೂಡದು.

## ೧೪ ಸತ್ಯಾಗ್ರಹಿಗೆ ಅವಶ್ಯವಿರುವ ಗುಣಗಳು

( ' ಹರಿಜನ ಬಂಧು ' ವಿನಲ್ಲಿ ೨೬-೩-೩೯ ರಲ್ಲಿ ಗಾಂಧೀಜಿಯವರು ಬರೆದುದು. )

೧ ಸತ್ಯಾಗ್ರಹಿಯು ಪರಮಾತ್ಮನಲ್ಲಿ ಸಂಪೂರ್ಣ ಮತ್ತು ಜೀವಂತ ಶ್ರದ್ಧೆಯುಳ್ಳವನಿರುವನು. ಅವನೇ ಸನಾತನವಾದ ಆಧಾರನು.

೨ ಸತ್ಯಾಗ್ರಹಿಯು ಧರ್ಮದಲ್ಲಿರುವಷ್ಟು ಆಸ್ಥೆಯನ್ನು ಸತ್ಯ ಅಹಿಂಸೆಗಳ ಬಗ್ಗೆ ವಹಿಸುವನು. ಆದುದರಿಂದ ಮನುಷ್ಯನಲ್ಲಿರುವ ಸ್ವಾಭಾವಿಕ ಒಳ್ಳೆತನದಲ್ಲಿ ಅವನ ವಿಶ್ವಾಸವಿರುವದು. ಈ ಒಳ್ಳೇತನವನ್ನು ಜಾಗ್ರತಗೊಳಿಸಲು ಅವನು ಯಾವಾಗಲೂ ಹೆಣಗುವನು. ಸತ್ಯ ಮತ್ತು ಪ್ರೇಮದ ಮಾರ್ಗದಿಂದಲೆ ಆ ಪ್ರಯತ್ನ ನಡೆಸುವನು. ಹಾಗೆ ಮಾಡುವಾಗ ಉಂಟಾದ ಕಷ್ಟನಷ್ಟಗಳನ್ನೆಲ್ಲ ತಾಳ್ಮೆಯಿಂದ ಸಹಿಸುವನು.

೩ ಅವನ ಜೀವನಕ್ರಮವು ಯಾವಾಗಲೂ ಶುದ್ಧವಿರಬೇಕು. ತನ್ನ ಕಾರ್ಯಕ್ಕೆ ಸರ್ವಸ್ವವನ್ನು ಆನಂದದಿಂದ ಬಲಿಕೊಡಲು ಅವನು ಸಿದ್ಧನಿರಬೇಕು.

೪ ಅವನು ಸತತ ಖಾದೀಧಾರಿ ಇದ್ದು ನೂಲುತಿರಬೇಕು. ಹಿಂದೀ ಜನರಿಗೆ ಇದು ಅವಶ್ಯ.

೫ ಅವನು ನಿರ್ವ್ಯಸನಿಯೂ ಎಲ್ಲ ಮಾದಕ ಪದಾರ್ಥಗಳನ್ನು ಬಿಟ್ಟವನೂ ಇರಬೇಕು. ಇದರಿಂದ ಅವನ ಮನಸು ನಿರ್ಮಲವೂ ನಿಶ್ಚಲವೂ ಇರಬಲ್ಲದು.

೬ ಕಾಲಕಾಲಕ್ಕೆ ಮಾಡಲಾದ ಶಿಸ್ತಿನ ನಿಯಮಗಳನ್ನು ಅವನು ಸ್ವಸಂತೋಷದಿಂದ ಬಿಟ್ಟುಬಿಡದೆ ಪಾಲಿಸುವನು.

೭ ಸಾಮಾನ್ಯವಾಗಿ ಸೆರೆಮನೆಯ ನಿಯಮಗಳನ್ನು ಅವನು ಪಾಲಿಸುವನು. ಆದರೆ ಅವನ ಮಾನಭಂಗವಾಗುವಂಥವುಗಳಿದ್ದರೆ ಅವನ್ನು ಮುರಿಯುವನು.

## ೧೫ ಸಾಮುದಾಯಿಕ ಕಾಯಿದೆಭಂಗ

೧ ಯಾವದೇ ಸ್ಥಾನದಲ್ಲಿ ಸಾಮುದಾಯಿಕ ಸತ್ಯಾಗ್ರಹವನ್ನು ಹೂಡಬೇಕಾದರೆ ಕೆಳಗೆ ತೋರಿಸಿದ ಅನುಕೂಲ ಪರಿಸ್ಥಿತಿ ಬೇಕು. ಇಲ್ಲದೆ ಹೋದರೆ ಹಿಂಸೆ, ಪರಸ್ಪರ ವೈರಭಾವ, ಇದಲ್ಲದೆ ಜುಲುಮೆ ಮತ್ತು ದಮನನೀತಿಯ ಮೂಲಕ ಉಂಟಾಗುವ ಭಯ-ಭೀತತೆ ಇವುಗಳ ಪ್ರಾದುರ್ಭಾವವಾಗುವ ಸಂಭವವು ಇರುವದು.

೨ ಸತ್ಯಾಗ್ರಹವನ್ನು ಯೋಜಿಸುವ ಮುಖಂಡರಲ್ಲಿ ಒಮ್ಮನಸ್ಸು, ಪರಸ್ಪರರಲ್ಲಿ ವಿಶ್ವಾಸ ಇವು ಅವಶ್ಯ. ಪರಸ್ಪರರು ಹೇಗೆ ನಡೆದುಕೊಳ್ಳಬಹುದು ಎಂಬ ಬಗ್ಗೆ ಸಂಶಯ, ಮುಖಂಡರ ಧೋರಣೆಯ ಬಗ್ಗೆ ಅನುಯಾಯಿಗಳಲ್ಲಿ ಅವಿಶ್ವಾಸ ಅಥವಾ ಅರೆವಿಶ್ವಾಸ ಕಂಡುಬಂದರೆ ಅದು ಪ್ರತಿಕೂಲ ಪರಿಸ್ಥಿತಿ ಎಂದು ತಿಳಿಯಬೇಕು.

೩ ಸತ್ಯಾಗ್ರಹವನ್ನು ಯೋಜಿಸುವ ಮುಖಂಡರು ಬೇರೆ ಬೇರೆ ರಾಜಕೀಯ ವಿಚಾರದವರಿದ್ದುದಾದರೆ ಆಯಾ ಸತ್ಯಾಗ್ರಹದ ತಾತ್ಕಾಲಿಕ ಉದ್ದೇಶವನ್ನು ಕುರಿತು ಎಲ್ಲರೂ ಸ್ಪಷ್ಟವಿರಬೇಕು ಮತ್ತು ಸತ್ಯಾಗ್ರಹ ನಡೆಯುತಿರುವ ವರೆಗೆ ಮತಭೇದಗಳುಳ್ಳ ರಾಜಕೀಯ ವಾದ-ವಿವಾದಗಳನ್ನು ನಿಲ್ಲಿಸಬೇಕೆಂಬ ಬಗ್ಗೆ ಎಲ್ಲರಲ್ಲಿ ಒಮ್ಮತವಿರಬೇಕು.

೪ ಮುಖಂಡರು ಸೂಚಿಸಿದ ಕ್ರಮಗಳನ್ನು ಸ್ವಸಂತೋಷದಿಂದಲೂ ಜಿಗುಟುತನದಿಂದಲೂ ಪಾಲಿಸುವಷ್ಟು ಆಯಾ ಅನುಯಾಯಿಗಳು ಮುಖಂಡರಲ್ಲಿ ವಿಶ್ವಾಸವುಳ್ಳವರಿರಬೇಕು. ಇಂತಹದನ್ನು ಮಾಡಬೇಡಿರಿ ಎಂದು ಹೇಳಿದ್ದನ್ನು ಕೇಳುವಷ್ಟು ಆಯಾ ಅನುಯಾಯಿಗಳ ಮೇಲೆ ಮುಖಂಡರ ವರ್ಚಸ್ಸು ಇರಲಿಕ್ಕೆಬೇಕು.

೫ ವಿರೋಧಿಪಕ್ಷದವರು ತಮ್ಮ ಮುಖಂಡರ ಮೇಲೆ ಹೊರಿಸಬಹುದಾದ ಯಾವದೆ ದೋಷಾರೋಪಗಳನ್ನು ನಂಬದಷ್ಟು ವಿಶ್ವಾಸವು ಅನು

ಯಾಯಿಗಳದು ಮುಖಂಡರಲ್ಲಿರಬೇಕು. ಅಂಥ ಯಾವ ದೋಷಾರೋಪ ಗಳಿಂದಲೂ ಅನುಯಾಯಿಗಳಲ್ಲಿ ಬುದ್ಧಿಭೇದವಾಗಕೂಡದು.

೬ ಸ್ವರಾಜ್ಯ ಇಲ್ಲವೆ ಹೊಣೆಗಾರ ರಾಜ್ಯಪದ್ಧತಿಯ ಬಗ್ಗೆ ಸತ್ಯಾಗ್ರಹ ಹೂಡುವದಾದರೆ ಆದಷ್ಟು ಮಟ್ಟಿಗೆ ತತ್ಪೂರ್ವದಲ್ಲಿ ಜಾತಿ ಜಾತಿಗಳ ಪ್ರಶ್ನೆ ಗಳನ್ನು ಬಿಡಿಸಿರುವದು ಅವಶ್ಯ. ಆ ಪ್ರಶ್ನೆಗಳನ್ನೆತ್ತಿ ಒಡಕು ಹುಟ್ಟಿಸಲು ವಿರೋಧಿಪಕ್ಷಕ್ಕೆ ಅವಕಾಶವಿರಕೂಡದು. (ಈ ಬಗ್ಗೆ ಈಗ ಗಾಂಧೀಜಿಯವರ ಮತವು ಹೀಗಿರುವದು: ಪರಕೀಯ ಸತ್ತೆ ಇಲ್ಲಿರುವ ವರೆಗೆ ಜಾತಿ ಜಾತಿಗಳ ಪ್ರಶ್ನೆ ಬಿಡುವದು ದುಸ್ಸಾಧ್ಯವು. ಆದುದರಿಂದ ಅದು ಸತ್ಯಾಗ್ರಹ ಹೂಡ ದಿರಲು ಕಾರಣವಾಗಲಾರದು. –ಸಂಪಾದಕ)

೭ 'ಸತ್ಯಾಗ್ರಹಿಗೆ ಅವಶ್ಯವಿರುವ ಗುಣಗಳು' ಈ ಪ್ರಕರಣದಲ್ಲಿ ಹೇಳಿದ ಮಾತುಗಳಲ್ಲಿ ವಿಶ್ವಾಸವಿದ್ದರೂ ಅವುಗಳನ್ನು ಕೂಡಲೆ ಪೂರೈಸುವ ಸಾಮರ್ಥ್ಯ ವಿಲ್ಲದಿದ್ದವರು ಸತ್ಯಾಗ್ರಹದ ತೀವ್ರ ಮತ್ತು ಹೊಣೆಗಾರ ಕಾರ್ಯಕ್ರಮಗಳಲ್ಲಿ ಭಾಗವಹಿಸಬಾರದು. ಆದರೆ ಅವರು ರಚನಾತ್ಮಕ ಕಾರ್ಯವನ್ನು ಚನ್ನಾಗಿ ನಡೆಸಬೇಕು ಮತ್ತು ಅದರ ಹೊಣೆ ಹೊರಬೇಕು. ಜನರು ಅದಕ್ಕೆ ಪೂರ್ಣ ಬೆಂಬಲಗೊಡಬೇಕು.

೮ ಸತ್ಯ ಅಹಿಂಸೆಗಳ ಮುಖಾಂತರ ಸ್ವರಾಜ್ಯ ದೊರಕಿಸಲು ಜಾತಿ ಜಾತಿ ಗಳ ಐಕ್ಯ, ಅಸ್ಪೃಶ್ಯತಾನಿವಾರಣೆ, ವ್ಯಾಪಕ ಖಾದೀ ಪ್ರಚಾರ, ಮದ್ಯ ಮಾದಕ ಪದಾರ್ಥಗಳ ಪ್ರತಿಬಂಧ ಇವುಗಳ ಬಗ್ಗೆ ಜನಸಾಮಾನ್ಯರ ದೊಡ್ಡ ಬಹುಮತವು ಅವಶ್ಯ. ಅದೇ ರೀತಿ ಸತ್ಯಾಗ್ರಹಮಾರ್ಗದ ಬಗ್ಗೆ ಸಹಾನು ಭೂತಿ ಇದ್ದವರಲ್ಲಿ ಪೂರ್ಣ ಒಮ್ಮತ ಇರುವದು ಅವಶ್ಯ. ಹೀಗಿರದೆ ಹೋದರೆ ಸಾಮುದಾಯಿಕ ಸತ್ಯಾಗ್ರಹಕ್ಕೆ ಅನುಕೂಲ ಪರಿಸ್ಥಿತಿ ಇದೆ ಎಂದು ಹೇಳಲಿ ಕ್ಕಾಗದು. ಆ ವರೆಗೆ ನಿಜವಾದ ಸ್ವರಾಜ್ಯವು ಅಶಕ್ಯಪ್ರಾಯವೆ ಇರುವದು.

೯ ಸತ್ಯಾಗ್ರಹದ ಯಾವದೆ ಹೋರಾಟವು ಹೂಡಲಾಗುವ ಮೊದಲು, ಅದೇ ರೀತಿ ಅದು ನಡೆದಿರುವಾಗ ವಿರೋಧಿ ಪಕ್ಷ, ಇಲ್ಲವೆ ಸಂಸ್ಥೆ, ಇಲ್ಲವೆ ಅಧಿಕಾರಿಗಳು ಇವುಗಳನ್ನು ಕುರಿತು ಜನಸಾಮಾನ್ಯರಲ್ಲಿ ತಿರಸ್ಕಾರದ ಭಾವನೆ ಇರಕೂಡದು. ಅಂಥ ತಿರಸ್ಕಾರದ ಭಾವನೆ ಉಂಟಾಗುವಂಥ ಭಾಷೆಯನ್ನು ಉಪಯೋಗಿಸಕೂಡದು. ಅಂಥ ಭಾಷೆ ಉಪಯೋಗಿಸುವಂಥ ಪ್ರಚಾರಕ ರನ್ನು ಅಂಕೆಯಲ್ಲಿಟ್ಟುಕೊಳ್ಳುವದು ಸಾಧ್ಯವಾಗದೆ ಹೋದರೆ ಪರಿಸ್ಥಿತಿಯು ಸತ್ಯಾಗ್ರಹಕ್ಕೆ ಅನುಕೂಲವಿಲ್ಲ ಎಂದು ತಿಳಿಯಬೇಕು.

೧೦ ಗುಪ್ತ ವ್ಯವಸ್ಥೆ ಮಾಡದೆ ಸತ್ಯಾಗ್ರಹ ನಡೆಯಬಲ್ಲದು ಎಂಬ ವಿಶ್ವಾಸ ವಿಲ್ಲದಿದ್ದರೆ ಅದು ಅನುಕೂಲ ಸ್ಥಿತಿಯಲ್ಲ ಎಂದು ತಿಳಿಯಬೇಕು.

೧೧ ಪರಿಸ್ಥಿತಿ ಅನುಕೂಲವಾಗುವ ವರೆಗೆ ಚತುರ್ವಿಧ (ಈಗ ಚತುರ್ದಶವಿಧ -ಸಂಪಾದಕ) ರಚನಾತ್ಮಕ ಕಾರ್ಯಕ್ರಮ ಮತ್ತು ಇತರ ಲೋಕಸೇವೆಯ ಕಾರ್ಯಕ್ರಮಗಳನ್ನು ಮಾಡುತಿರುವದೆ ಸ್ವರಾಜ್ಯದ ಸಾಧನೆ ಎನಿಸುವದು. ಇಂಥ ಸಾಧನೆಯನ್ನು ವರ್ಷಾನುವರುಷ ಮಾಡುವ ಪ್ರಸಂಗ ಬಂದರೂ ಅದ ರಲ್ಲಿ ಹಾನಿ ಯಾವದೂ ಇಲ್ಲ. ಅದು ಪ್ರಗತಿಯೆ ಇರುವದು. ಅದು ಪುಚ್ಛ ಪ್ರಗತಿಯಲ್ಲ.

# ಪಂಚಮ ಖಂಡ

# ಸ್ವರಾಜ್ಯ

## ೧ ರಾಮರಾಜ್ಯ

೧ ರಾಮರಾಜ್ಯವೆ ಸ್ವರಾಜ್ಯದ ಆದರ್ಶವು. ರಾಮರಾಜ್ಯವೆಂದರೆ ಧರ್ಮದ ರಾಜ್ಯವು ಅಥವಾ ನ್ಯಾಯದ ಮತ್ತು ಪ್ರೇಮದ ರಾಜ್ಯವು ಅಥವಾ ಅದು ಅಹಿಂಸಕ ಸ್ವರಾಜ್ಯವು ಇಲ್ಲವೆ ಜನತೆಯ ಸ್ವರಾಜ್ಯವು.

೨ ಜನರ ಸ್ವರಾಜ್ಯವೆಂದರೆ, ಪ್ರತಿಯೊಂದು ವ್ಯಕ್ತಿಯ ಸ್ವರಾಜ್ಯದ ಮೂಲಕ ಉಂಟಾದ ಪ್ರಜಾಸತ್ತಾತ್ಮಕ ರಾಜ್ಯವು. ಪ್ರತಿಯೊಬ್ಬ ವ್ಯಕ್ತಿಯು ತನ್ನ ನಾಗರಿಕ ಧರ್ಮದ ಪರಿಪಾಲನೆ ಮಾಡುವದರಿಂದ ಈ ಬಗೆಯ ರಾಜ್ಯವು ನಿರ್ಮಾಣವಾಗುವದು.

೩ (ಅ) ಈ ಬಗೆಯ ಸ್ವರಾಜ್ಯದಲ್ಲಿ ಯಾವನಿಗೂ ತನ್ನ ಅಧಿಕಾರದ ಅಹಂಕಾರಪೂರ್ವಕ ಅರಿವು ಎಂಬುದು ಇರುವದಿಲ್ಲ. ಅವಶ್ಯವಿದ್ದಾಗ ಆಯಾ ಅಧಿಕಾರವು ಅವನವನ ಕಡೆಗೆ ಬಂದೇಬರುವದು. ಜನರು ಅಲ್ಲಿ ತಮ್ಮ ಹಕ್ಕುಗಳನ್ನು ತಿಳಿದುಕೊಳ್ಳುವ ಅವಶ್ಯಕತೆ ಇಲ್ಲ. ಆದರೆ ಎಲ್ಲರೂ

ತಮ್ಮ ತಮ್ಮ ಧರ್ಮವನ್ನೂ ಕರ್ತವ್ಯವನ್ನೂ ಅವಶ್ಯ ತಿಳಿದುಕೊಳ್ಳಲೇಬೇಕು. ಪ್ರತಿಯೊಂದು ಕರ್ತವ್ಯಪಾಲನೆಯ ಫಲವಾಗಿ ಯಾವದೊಂದು ಹಕ್ಕು ತನ್ನಿಂದ ತಾನೆ ಪ್ರಾಪ್ತವಾಗುವದು. ಕರ್ತವ್ಯಪಾಲನೆಯ ಮೂಲಕ ಪ್ರಾಪ್ತವಾದ ಹಕ್ಕುಗಳು ಅಥವಾ ಅಧಿಕಾರಗಳು ಇವೇ ನಿಜವಾದವುಗಳು.

(ಬ) ಸೇವಾಧರ್ಮವನ್ನು ( ಲೋಕ ಸೇವೆ ) ಪಾಲಿಸುವವನಿಗೆಯೆ ನಾಗರಿಕತ್ವದ ನಿಜವಾದ ಹಕ್ಕುಗಳು ಪ್ರಾಪ್ತವಾಗುವವು ಮತ್ತು ದಕ್ಕುವವು.

(ಕ) ಅದೇ ರೀತಿ ಸತ್ಯ ಮತ್ತು ಅಹಿಂಸಾಧರ್ಮವನ್ನು ಪಾಲಿಸುವವರಿಗೆ ಪ್ರತಿಷ್ಠೆ ದೊರಕುವದು. ಆ ಮೂಲಕ ಅವರಿಗೆ ಅಧಿಕಾರಗಳೂ ಪ್ರಾಪ್ತವಾಗುವವು. ಅಂಥವರು ತಮ್ಮ ಅಧಿಕಾರಗಳನ್ನು ಸ್ವಾರ್ಥಕ್ಕಾಗಿ ಉಪಯೋಗಿಸದೆ ಸೇವೆಗಾಗಿಯೆ ಉಪಯೋಗಿಸುವರು.

೪ ಒಂದು ಕಡೆ ಅಪಾರವಾದ ಸಂಪತ್ತು ರಾಶಿರಾಶಿಯಾಗಿ ಬಿದ್ದಿರುವದು, ಇನ್ನೊಂದು ಕಡೆ ದೈನ್ಯದಿಂದ, ಹಸಿವೆಯಿಂದ ಸಾಯುವದು ರಾಮರಾಜ್ಯದಲ್ಲಿ ಸಂಭವಿಸದು. ಅದರಲ್ಲಿ ಯಾವನೂ ಹೊಟ್ಟೆಗೆ ಕೂಳಿಲ್ಲದೆ ಸಾಯಲಾರನು; ಆ ರಾಜ್ಯವು ಪಶುಬಲದ ಆಧಾರದ ಮೇಲೆ ನಿಂತಿರದೆ ಜನರ ಪ್ರೀತಿ, ಅವರು ಜ್ಞಾನಪೂರ್ವಕವಾಗಿಯೂ ಸ್ವೇಚ್ಛೆಯಿಂದಲೂ ನಿರ್ಭಯವಾಗಿಯೂ ಮಾಡುವ ಸಹಕಾರದ ಅಡಿಗಲ್ಲಿನ ಮೇಲೆ ನಿಂತಿರುವದು.

೫ ರಾಮರಾಜ್ಯದಲ್ಲಿ ಬಹುಸಂಖ್ಯಾಕರು ಅಥವಾ ಬಹುಸಂಖ್ಯ ಜಾತಿಯವರು ಅಲ್ಪಸಂಖ್ಯಾಕರನ್ನು ಅಥವಾ ಅಲ್ಪಸಂಖ್ಯಜಾತಿಯವರನ್ನು ಕುಗ್ಗುಬಡಿಯುವದಿಲ್ಲ; ಆದರೆ ಅಲ್ಪಸಂಖ್ಯಾಕರೂ ಬಹುಸಂಖ್ಯಾಕರಂತೆಯೆ ಸ್ವಾತಂತ್ರ್ಯಸುಖವನ್ನು ಅನುಭವಿಸುವರು ಮತ್ತು ಬಹುಸಂಖ್ಯ ಜಾತಿಯವರು ಅಲ್ಪಸಂಖ್ಯ ಜಾತಿಯವರ ಹಿತವನ್ನು ಸಾಧಿಸುವದೆ ತಮ್ಮ ಕರ್ತವ್ಯವೆಂದು ತಿಳಿದುಕೊಳ್ಳುವರು.

೬ ರಾಮರಾಜ್ಯವು ಕೋಟಿಗಟ್ಲೆ ಜನರ ಸಲುವಾಗಿ ಮತ್ತು ಸುಖದ ಸಲುವಾಗಿ ನಡೆಯತಕ್ಕ ರಾಜ್ಯವು. ಪ್ರಜರ ನಿಜವಾದ ಸೇವಕನಿಗೇ ಆ ರಾಜ್ಯಕಾರಭಾರದಲ್ಲಿ ಮುಖ್ಯ ಅಧಿಕಾರಪದವು ಸಿಕ್ಕುವದು. ಅವನಿಗೆ ರಾಜನೆನ್ನಬಹುದು, ಅಧ್ಯಕ್ಷನೆನ್ನಬಹುದು, ಅಥವಾ ಮತ್ತಾವ ಹೆಸರಿನಿಂದಾದರೂ ಕರೆಯಬಹುದು; ಅವನು ಪ್ರಜರ ಸೇವಕನಿರುವದರಿಂದಲೆ ಆ ಸ್ಥಾನವನ್ನು

ಪಡೆಯುವನು. ಪ್ರಜರ ಪ್ರೀತಿಗೆ ಪಾತ್ರನಾಗಿದ್ದರೆ ಆ ಅಧಿಕಾರ ಸ್ಥಳದಲ್ಲಿ ಉಳಿಯುವನು ಮತ್ತು ಅವರ ಕಲ್ಯಾಣಕ್ಕಾಗಿಯೆ ಪ್ರಯತ್ನಿಸುವನು. ಅವನು ಪ್ರಜರ ಧನವನ್ನು ದುಂದುಗಾರಿಕೆಯಿಂದ ಹಾಳು ಮಾಡುವವನೂ ಅಧಿಕಾರ ಬಲದಿಂದ ಪ್ರಜರನ್ನು ಪೀಡಿಸುವವನೂ ಇರಲರಿಯನು. ಅವನು ರಾಜ ನೆಂದು ಕರೆಯಲ್ಪಡುತ್ತಿದ್ದರೂ ಓರ್ವ ಯತಿಯಂತೆ ಇರುವನು.

೭ ರಾಮರಾಜ್ಯದಲ್ಲಿ ಆಳಿಕೆ ಎಂಬದು ತೀರ ಕಡಿಮೆ. ಜನರು ತಾವೇ ಸೇರಿಕೊಂಡು ತಾವೇ ಹೆಚ್ಚಾಗಿ ರಾಜ್ಯಕಾರಭಾರವನ್ನು ನಡೆಸಿಕೊಳ್ಳುತ್ತಿರು ವರು. ಜನರಿಗೆ ಶಿಕ್ಷೆಯ ಭಯವನ್ನು ತೋರಿಸಿ ಕಾಯಿದೆಗಳನ್ನು ಪಾಲಿಸಲು ಒತ್ತಾಯಪಡಿಸುವ ಕ್ರಮವು ಅಲ್ಲಿರಬಾರದು. ಪ್ರಜರು ತಮ್ಮಲ್ಲಿ ಸುಧಾರಣೆ ಗಳನ್ನು ಮಾಡಿಕೊಳ್ಳುವದಕ್ಕಾಗಿ ಕೌನ್ಸಿಲ್ಲು-ಅಸೆಂಬ್ಲಿಗಳ ಹಾಗೂ ಅಧಿಕಾರಿ ಗಳ ಸಹಾಯವನ್ನು ಕೋರುತ್ತ ಕುಳಿತುಕೊಳ್ಳುವದಿಲ್ಲ. ಜನರು ತಾವಾಗಿ ಮಾಡಿಕೊಂಡ ಸುಧಾರಣೆಗಳಿಗೆ ಅನುಕೂಲವಾಗುವಂತೆ ಕಾಯಿದೆಗಳನ್ನು ತಿದ್ದುವದಕ್ಕಾಗಿ ಕೌನ್ಸಿಲ್ಲು-ಅಸೆಂಬ್ಲಿಗಳು ಯತ್ನಿಸುವವು ಮತ್ತು ವ್ಯವಸ್ಥೆ ಯನ್ನು ಸರಿಯಾಗಿ ಇಡುವದಕ್ಕಾಗಿ ಅಧಿಕಾರಿಗಳು ಹೆಣಗಾಡುವರು.

೮ ರಾಮರಾಜ್ಯದಲ್ಲಿ ಒಕ್ಕಲತನವು ಊರ್ಜಿತಸ್ಥಿತಿಯಲ್ಲಿರುವದು ಮತ್ತು ಇತರ ಉದ್ಯೋಗಗಳು ಇದನ್ನವಲಂಬಿಸಿಕೊಂಡೆ ನಡೆಯುತ್ತಿರುವವು; ಅನ್ನ ವಸ್ತ್ರಗಳ ವಿಷಯದಲ್ಲಿ ಪ್ರಜರು ಸ್ವತಂತ್ರರಿರುವರು ಮತ್ತು ಹೋರಿ-ಹಸು ಗಳ ಸ್ಥಿತಿಯು ಸಾಕಷ್ಟು ಚನ್ನಾಗಿರುವದರಿಂದ ಆದರ್ಶ ಗೋರಕ್ಷಣೆಯು ಅಲ್ಲಿ ಆಗುತ್ತಿರುವದು.

೯ ರಾಮರಾಜ್ಯದಲ್ಲಿ ಸರ್ವಧರ್ಮಗಳೂ ವರ್ಣಗಳೂ ವರ್ಗಗಳೂ ಸಮ ಭಾವನೆಯಿಂದಲೂ ಸಖ್ಯಭಾವದಿಂದಲೂ ಇರುವವು; ಧಾರ್ಮಿಕ ಜಗಳಗಳು, ಕೀಳುತರದ ಸ್ಪರ್ಧೆಗಳು, ವಿರೋಧವನ್ನು ಬೆಳೆಸುವಂತಹ ಸಾರ್ಥಗಳು ಅಲ್ಲಿ ದೃಷ್ಟಿಗೋಚರವಾಗವು.

೧೦ ರಾಮರಾಜ್ಯದಲ್ಲಿ ಸ್ತ್ರೀಯರ ದರ್ಜೆಯೂ ಪುರುಷರ ದರ್ಜೆಯಷ್ಟೇ ಉಚ್ಚವಾಗಿರುವದು.

೧೧ ರಾಮರಾಜ್ಯದಲ್ಲಿ ಯಾವನೂ ತನ್ನ ಸಿರಿವಂತಿಕೆಯ ಮೂಲಕ ಇಲ್ಲವೆ ಸೋಮಾರಿತನದ ಮೂಲಕ ನಿರುದ್ಯೋಗಿಯಾಗಿರುವದಿಲ್ಲ; ಪರಿಶ್ರಮ ಮಾಡುತ್ತಿರುವವನು ಯಾವನೂ ಹಸಿವೆಯಿಂದ ಸಾಯಲಾರನು; ಅನು

ದ್ಯೋಗದ ಮೂಲಕ ಮನುಷ್ಯನು ಅಲಸಿಯಾಗುವಂತಹ ಪ್ರಸಂಗವು ಅಲ್ಲಿ ಬರುವದೆ ಇಲ್ಲ.

೧೨ ರಾಮರಾಜ್ಯದಲ್ಲಿ ಗೃಹಕಲಹವುಂಟಾಗುವದಿಲ್ಲ, ಹಾಗೆಯೆ ಪರರಾಜ್ಯದೊಡನೆ ಯುದ್ಧವೂ ಆಗುವದಿಲ್ಲ. ಅದರಲ್ಲಿ ಪರರ ರಾಜ್ಯಗಳನ್ನು ಅಪಹರಿಸುವಂಥ, ಗೆಲ್ಲುವಂಥ, ಅವುಗಳ ವ್ಯಾಪಾರ ಉದ್ಯೋಗಗಳನ್ನು ಮತ್ತು ನೀತಿಯನ್ನು ನಾಶಪಡಿಸುವಂಥ ರಾಜಕಾರಣಕ್ಕೆ ಎಡೆಯಿರುವದಿಲ್ಲ. ಆ ರಾಜ್ಯವು ಇತರರೊಡನೆ ಮಿತ್ರಭಾವದಿಂದಲೆ ವರ್ತಿಸುವದು.

೧೩ ಆದ್ದರಿಂದ ರಾಮರಾಜ್ಯದಲ್ಲಿ ಸೈನ್ಯದ ವೆಚ್ಚವು ತೀರ ಕಡಿಮೆ.

೧೪ ರಾಮರಾಜ್ಯದ ಪ್ರಜರು ಕೇವಲ ಓದು-ಬರಹ ಬಲ್ಲಂಥವರು ಇರದೆ ನಿಜವಾದ ಶಿಕ್ಷಣವನ್ನು ಪಡೆದವರಾಗಿರುವರು; ಎಂದರೆ ಅವರಿಗೆ ಮುಕ್ತಿಯನ್ನು ಕೊಡುವಂತಹ ಮತ್ತು ಮುಕ್ತಾವಸ್ಥೆಯಲ್ಲಿ ಸ್ಥಿರವಾಗಿರಲು ಬರುವಂಥ ಶಿಕ್ಷಣವು ಸಿಕ್ಕುತ್ತಿರುವದು.

೧೫ ರಾಮರಾಜ್ಯವೆಂಬದು ಬರೀ ಒಂದು ದೇಶದ ಸಲುವಾಗಿ ಇಲ್ಲವೆ ಪ್ರಜೆಗಳ ಸಲುವಾಗಿ ಆದರ್ಶಭೂತವಾದ ರಾಜ್ಯವಲ್ಲ. ಅದು ಇಡಿ ಜಗತ್ತಿನ ಆದರ್ಶವು. ಒಂದೆಡೆಯಲ್ಲಿ ರಾಮರಾಜ್ಯವು ಸ್ಥಾಪಿತವಾದರೂ ಅದರ ವರ್ಚಸ್ಸು ಎಲ್ಲೆಲ್ಲಿಯೂ ಕಂಡೇ ತೀರುವದು.

೧೬ ಈ ಸ್ಥಿತಿಯು ಒದಗಿತೆಂದರೆ ರಾಜ್ಯಗಳ ನಡುವೆ ಜಗಳದ ಕಾರಣವೆ ಉಳಿಯದು. ಅರ್ಥಾತ್ ಯುದ್ಧವೆಂಬ ವಸ್ತುವೆ ನಾಮಶೇಷವಾಗುವದು. ಎಲ್ಲ ಬಗೆಯ ಮತಭೇದಗಳು, ಜಗಳಗಳು, ವಿರೋಧಗಳು ಅಹಿಂಸಾಮೂಲಕವೆ ಸರಿಯಾಗುವವು.

## ೨ ತಂತ್ರಸುಧಾರಣೆ ಮತ್ತು ರಾಜ್ಯಶಾಸನಸುಧಾರಣೆ

೧ ತಂತ್ರಸುಧಾರಣೆಯ ಮತ್ತು ರಾಜ್ಯಶಾಸನ ಸುಧಾರಣೆಯ ಪ್ರಶ್ನೆಯು ಒಂದೇ ಅಲ್ಲ.

೨ ಅಧಿಕಾರದ ಉಪಯೋಗವನ್ನು ಮಾಡುವಂಥವರು ಪ್ರಜರೊಡನೆ ಹೇಗೆ ನಡೆದುಕೊಳ್ಳಬೇಕು, ಈ ಮನೋವೃತ್ತಿಯಲ್ಲಿ ಸಂಪೂರ್ಣ ಸುಧಾರಣೆ ಮಾಡುವದೆ ತಂತ್ರಸುಧಾರಣೆ ಎನಿಸುವದು.

೩ ರಾಜ್ಯಶಾಸನಸುಧಾರಣೆಯೆಂದರೆ ಕಾಯಿದೆಗಳನ್ನು ಮಾಡುವದ

ಕ್ಕಾಗಿಯೂ ರಾಜ್ಯದ ಬೇರೆ ಬೇರೆ ಖಾತೆಗಳ ಮೇಲ್ವಿಚಾರಣೆಯನ್ನು ನಡೆಸುವದಕ್ಕಾಗಿಯೂ ಆಯಾ ಖಾತೆಗಳ ನೀತಿಯನ್ನು ನಿಶ್ಚಯಿಸುವದಕ್ಕಾಗಿಯೂ ಎಷ್ಟು ಜನರು ಎಲ್ಲಿ ಸೇರಬೇಕು, ಅವರು ಯಾವ ರೀತಿ ವಿಷಯಗಳನ್ನು ಚರ್ಚಿಸಬೇಕು, ಮತ್ತು ಅವರನ್ನು ಯಾವ ರೀತಿಯಿಂದ ಈ ಕಾರ್ಯಕ್ಕಾಗಿ ನಿಯಮಿಸಬೇಕು. ಇವೇ ಮುಂತಾದ ವಿಷಯಗಳ ವಿಚಾರ.

೪ ಸದ್ಯಕ್ಕೆ ಅವಶ್ಯವಿದ್ದುದಕ್ಕಿಂತ ಹೆಚ್ಚು ಮಹತ್ವವು ರಾಜ್ಯಶಾಸನದ ಪ್ರಶ್ನೆಗೆ ಕೊಡಲ್ಪಟ್ಟಿರುವದು; ಇದರಿಂದ ನಾವು ಮೂಲ ವಿಷಯವನ್ನು ಮರೆತುಬಿಟ್ಟು ರಾಜ್ಯದ ಬಾಹ್ಯ ರೂಪಕ್ಕೆ ಹೆಚ್ಚು ಮಹತ್ವವನ್ನು ಕೊಟ್ಟು ಅದರ ವಿಚಾರಣೆಯಲ್ಲಿಯೆ ತೊಡಗಿರುವೆವು.

೫ ರಾಜ್ಯಶಾಸನದ ಗಹನವಿಚಾರಗಳು ಮತ್ತು ಅದರ ಭಿನ್ನ-ಭಿನ್ನವಾದ ಯೋಜನೆಗಳಲ್ಲಿರುವ ಸೂಕ್ಷ್ಮ ಭೇದಗಳು ಮತ್ತು ಅವುಗಳ ಮಹತ್ವವು ನಾಡಿನ ಕೋಟಿಗಟ್ಲೆ ಜನರಿಗೆ ತಿಳಿಯುವವು ಎಂದು ಯಾರೂ ಆಶಿಸಬಾರದು. ಏಕೆಂದರೆ ಅವರು ಈ ವಿಷಯಗಳನ್ನು ಕುರಿತು ಆಸ್ಥೆಯಿಂದ ವಿಚಾರ ಮಾಡಲು ಮುಂದೆ ಬರುವದಿಲ್ಲ.

೬ ತನ್ನ ದೇಶದ ರಾಜ್ಯಶಾಸನವು ರಾಜಸತ್ತಾತ್ಮಕವೊ ಪ್ರಜಾಸತ್ತಾತ್ಮಕವೊ ಸಾಮ್ರಾಜ್ಯದ ಒಂದು ಅಂಗವೊ ಅಥವಾ ಸ್ವತಂತ್ರವಾದುದೊ ಎನ್ನುವದು, ಮತ್ತು ೬ ಸಾವಿರ ಪ್ರತಿನಿಧಿಗಳಿಂದ ರಾಜ್ಯಶಾಸನವು ನಡೆಯುತ್ತಿದೆಯೊ ೬ ನೂರು ಪ್ರತಿನಿಧಿಗಳಿಂದ ನಡೆಯುತ್ತಿದೆಯೊ ಅವರಲ್ಲಿ ಹಿಂದುಗಳು ಹೆಚ್ಚಿರುವರೊ ಮುಸಲ್ಮಾನರು ಹೆಚ್ಚಿರುವರೊ ಎನ್ನುವದು ಮತ್ತು ಇವೆಲ್ಲ ವಿಷಯಗಳ ಮಹತ್ವವು ಅಶಿಕ್ಷಿತ ಹಳ್ಳಿಗರಿಗೆ ತಿಳಿಯುವದು ಕಠಿಣವಿರುವದು. ಈ ವಿಷಯಗಳ ಚರ್ಚೆಯಲ್ಲಿ ಬೀಳುವದರಿಂದ ಅವರಿಗೆ ಬಹಳ ಲಾಭವೂ ಆಗುವಂತೆ ತೋರುವದಿಲ್ಲ.

೭ ತಮ್ಮ ಹಳ್ಳಿಯ ಪ್ರಮುಖರು, ಪೋಲೀಸಗೌಡ ಮತ್ತು ಶಾನಭೋಗರು, ತಮ್ಮ ಅಧಿಕಾರದ ದರ್ಪವನ್ನು ತೋರಿಸುವರೊ ಅಧಿಕಾರದ ಬೆದರಿಕೆ ಹಾಕಿ ತಮ್ಮಿಂದ ಲಂಚವನ್ನು ತೆಗೆದುಕೊಳ್ಳಲು ಬರುವರೊ ಅಥವಾ ತಮ್ಮ ಮಿತ್ರರೂ ಸಲಹೆಗಾರರೂ ಸಂಕಟಗಳಲ್ಲಿ ಸಂಗಡಿಗರೂ ಇರುವರೊ ಹೇಗೆ? ಇದೇ ಹಳ್ಳಿಗರಿಗೆ ಮಹತ್ವದ ಪ್ರಶ್ನೆಯಾಗಿರುವದು. ಇದಲ್ಲದೆ ತಾವು ತಮ್ಮ ಮನಸ್ಸಿಗೆ ಬಂದಂತೆ ಪ್ರಜರನ್ನು ನಡೆಸಿಕೊಳ್ಳಲಿಕ್ಕೆ ನಿಯಮಿಸಲ್ಪಟ್ಟ

ದೊಡ್ಡ ಅಥವಾ ಚಿಕ್ಕ ಅಧಿಕಾರಿಗಳು ಎಂದು ತಿಳಿದುಕೊಳ್ಳುವರೊ ಅಥವಾ ತಾವು ಪ್ರಜರ ಸೇವಕರೆಂದು ತಿಳಿದುಕೊಳ್ಳುವರೊ ? ಎಂಬ ಪ್ರಶ್ನೆಯೂ ಅವರಿಗೆ ಮಹತ್ವಪೂರ್ಣವಾದದ್ದಾಗಿರುವದು.

೮ ಅದೇ ರೀತಿ ತಮ್ಮ ಮೇಲೆ ಹೊರಿಸಲ್ಪಟ್ಟ ಕರದ ಹೊರೆಯು ಹೆಚ್ಚು ಭಾರವಾಗಿರುವದೊ ಹಗುರಾಗಿರುವದೊ ಈ ಕರವು ತಮ್ಮಿಂದ ಯಾವ ರೀತಿಯಾಗಿ, ಯಾವ ರೂಪದಲ್ಲಿ ಮತ್ತು ಯಾವ ಸಮಯದಲ್ಲಿ ವಸೂಲು ಮಾಡಲ್ಪಡುವದು ಮತ್ತು ಈ ಕರದ ಉಪಯೋಗವು ಯಾವ ಕೆಲಸಗಳಲ್ಲಿ ಆಗುವದು ? ಎಂಬ ಪ್ರಶ್ನೆಯಂತೂ ಪ್ರಜರಿಗೆ ಅತ್ಯಂತ ಮಹತ್ವಪೂರ್ಣವಾದದ್ದಾಗಿರುವದು.

೯ ರಾಜ್ಯಶಾಸನಕ್ಕೆ ಒಂದು ಪದ್ಧತಿಯು ಪ್ರಾಪ್ತವಾಗುತ್ತಲೆ ಈ ತರದ ಸುಧಾರಣೆಯು ಆಗುವದಿಲ್ಲ; ಆದರೆ ಆ ಪದ್ಧತಿಯನ್ನು ಅಮಲಿನಲ್ಲಿ ತರುವ ಅಧಿಕಾರಿಗಳ ಧರ್ಮಬುದ್ಧಿಯಿಂದಲೂ ತಮ್ಮ ಮತವನ್ನು ಹೆಚ್ಚು ಪರಿಣಾಮಕಾರಿಯಾಗುವಂತೆ ಮಾಡಲಿಕ್ಕೆ ಬೇಕಾದ ಪ್ರಜರಲ್ಲಿದ್ದ ಪುರುಷಾರ್ಥದ ಶಕ್ತಿಯಿಂದಲೂ ಆಗುವದು. ರಾಜ್ಯಶಾಸನದ ಬಾಹ್ಯಸ್ವರೂಪವು ಯಾವದೆ ತರದ್ದಿರಲಿ, ಅಧಿಕಾರಿಗಳು ಧರ್ಮಬುದ್ಧಿಯುಳ್ಳವರು ಇದ್ದುಕೊಂಡು ಪ್ರಜರ ಸೇವಕರಿದ್ದರೆ ಮತ್ತು ಪ್ರಜರು ಪುರುಷಾರ್ಥಿಗಳಾಗಿದ್ದರೆ ಸರಕಾರದ ಕಡೆಯಿಂದ ಅನ್ಯಾಯವೂ ಬಲಾತ್ಕಾರವೂ ಬಹಳ ವೇಳೆಯ ವರೆಗೆ ಆಗಲರಿಯದು.

## ೩ ಜಾತಿಗಳಲ್ಲಿ ಐಕ್ಯ

೧ ದೇಶದ ಬೇರೆ ಬೇರೆ ಜಾತಿಗಳಲ್ಲಿ ಐಕ್ಯವೂ ಸಮಾಧಾನ ಶಾಂತಿಗಳೂ ಉಂಟಾಗುವ ವರೆಗೆ ಸ್ವರಾಜ್ಯವನ್ನು ದೊರಕಿಸುವದೂ ಅದನ್ನು ಕಾಯ್ದಿಟ್ಟುಕೊಳ್ಳುವದೂ ಅಶಕ್ಯವಿರುವದು.

೨ ಈ ಐಕ್ಯವನ್ನುಂಟುಮಾಡುವದಕ್ಕೋಸ್ಕರ ಸರ್ವ ಜಾತಿಗಳಲ್ಲಿ ಮುಕ್ತವಾದ ಭೋಜನದ ಮತ್ತು ವಿವಾಹದ ವ್ಯವಹಾರವು ಆಗಲೇಬೇಕು, ಅಥವಾ ಜಾತಿಜಾತಿಗಳ ನಡುವಿನ ಭಿನ್ನ ಭಿನ್ನ ಧರ್ಮ ಮತ್ತು ಸಂಸ್ಕೃತಿಗಳ ಭೇದವು ಇಲ್ಲದಂತಾಗಲೇಬೇಕು, ಯಾವುದಾದರೊಂದೆ ಧರ್ಮವನ್ನವಲಂಬಿಸಿಯಾಗಲಿ ಅಥವಾ ಧರ್ಮಗಳನ್ನೆಲ್ಲ ತೊರೆದಾಗಲಿ ಒಂದೇ ಸಂಸ್ಕೃತಿಯನ್ನು ನಿರ್ಮಿಸಬೇಕು, ಎನ್ನುವದು ಅವಶ್ಯವಿರುವದಿಲ್ಲ ಮತ್ತು ಇದು ಇಷ್ಟವಾದುದೂ

ಅಲ್ಲ. ಪ್ರತಿಯೊಂದು ಜಾತಿಯೂ ತನ್ನ ವೈಶಿಷ್ಟ್ಯವನ್ನು ಕಾಪಾಡಿಕೊಂಡು ಸಹಿಷ್ಣುತೆಯ ಮೂಲಕ ಐಕ್ಯವನ್ನುಂಟುಮಾಡಿಕೊಳ್ಳಲಿಕ್ಕೆ ಬೇಕು.

೩. ಆದರೆ ಈ ಐಕ್ಯಕ್ಕಾಗಿ ಬಹುಸಂಖ್ಯೆ ಇರುವ ಜಾತಿಗಳು ಅಲ್ಪಸಂಖ್ಯೆ ಇರುವ ಜಾತಿಗಳಿಗೆ ಅಭಯುವನ್ನೀಯಬೇಕು. ನ್ಯಾಯ ಮತ್ತು ಸಾರ್ವಜನಿಕ ಹಿತಕ್ಕೆ ವಿರೋಧವಿರದಂತಹ ರೀತಿಯಲ್ಲಿ ಅಲ್ಪಸಂಖ್ಯ ಜಾತಿಗಳಿಗೆ ಧರ್ಮ, ಭಾಷೆ, ಸಾಹಿತ್ಯ, ಜಾತಿಗಳ ಕಾಯಿದೆ, ನಡತೆ-ನಡಾವಳಿ, ಶಿಕ್ಷಣ, ಅರ್ಥ-ಪ್ರಾಪ್ತಿ ಮುಂತಾದವುಗಳ ಬಗ್ಗೆ ತೊಂದರೆಯಾಗಗೊಡದಿರುವದೆ ಬಹುಸಂಖ್ಯ ಜಾತಿಗಳ ಗುರಿಯಾಗಿರಬೇಕು. ಬಹುಸಂಖ್ಯ ಜಾತಿಗಳು ತಮ್ಮ ಹಿತ ಚಿಂತಕವಿರುವವೆಂದು ಅಲ್ಪಸಂಖ್ಯ ಜಾತಿಗಳಲ್ಲಿ ನಂಬಿಗೆ ಹುಟ್ಟಿಸಬೇಕು.

೪ ಬಹುಸಂಖ್ಯ ಜಾತಿಗೆ ಅಲ್ಪಸಂಖ್ಯ ಜಾತಿಯ ಭಯವುಂಟಾದರೆ ಅದು ಇವೆರಡರಲ್ಲಿನ ಒಂದು ಸ್ಥಿತಿಯನ್ನು ಸೂಚಿಸುವುದು: (೧) ಬಹುಸಂಖ್ಯ ಜಾತಿಯ ಜೀವನದಲ್ಲಿ ಹುಳುಕು ಇರುವದು ಇಲ್ಲವೆ ಅದು ಹೇಡಿಯಾಗಿರುವದು ಮತ್ತು ಅಲ್ಪಸಂಖ್ಯ ಜಾತಿಗೆ ಪಶುಬಲದ ಹೆಮ್ಮೆ ಇರುವದು. (ಹೆಮ್ಮೆಯು ರಾಜಸತ್ತೆಯಿಂದಾಗಲಿ ಸ್ವತಂತ್ರವಾಗಿಯಾಗಲಿ ಇರಬಹುದು). (೨) ಬಹುಸಂಖ್ಯ ಜಾತಿಯಿಂದ ಯಾವದಾದರೊಂದು ಅನ್ಯಾಯುವು ಆಗುತ್ತಿರಬೇಕು, ಮತ್ತು ನಿರಾಶೆಯಿಂದ ಹಂಗುದೊರೆದು ಸಾಯುವ ವೃತ್ತಿಯು ಅಲ್ಪಸಂಖ್ಯ ಜಾತಿಯಲ್ಲಿ ಬಂದಿರಬೇಕು. ಇವೆರಡಕ್ಕೂ ಒಂದೇ ಒಂದು ಉಪಾಯುವು ಇರುವದು: ಬಹುಸಂಖ್ಯ ಜಾತಿಯು ಸತ್ಯಾಗ್ರಹದ ಸಿದ್ಧಾಂತಗಳ ಮೇರೆಗೆ ತನ್ನ ಜೀವನವನ್ನಿಡುವದು. ಸತ್ಯಾಗ್ರಹಿಯಾಗಿ ಎಷ್ಟು ಬೆಲೆ ಬಿದ್ದರೂ ಕೊಟ್ಟು ಅನ್ಯಾಯುವನ್ನು ದೂರಮಾಡುವದು ಮತ್ತು ತನ್ನ ಹೇಡಿತನವನ್ನು ಬಿಸುಟಿ ಅಲ್ಪಸಂಖ್ಯ ಜಾತಿಯ ಪಶುಬಲವನ್ನು ಸತ್ಯಾಗ್ರಹದಿಂದ ಗೆಲ್ಲುವದು.

೫ ಜಾತಿ-ಜಾತಿಗಳಲ್ಲಿ ಜಗಳವುಂಟಾದಾಗ ಸರ್ಕಾರದ ಅಥವಾ ಕಾಯಿದೆಗಳ ಸಹಾಯವನ್ನು ಬೇಡುವದೆಂದರೆ ಪ್ರಜರನ್ನು ನಿರ್ವೀರ್ಯರನ್ನಾಗಿ ಮಾಡಿದಂತೆಯೆ. ಎರಡು ಜಾತಿಗಳು ಜಗಳವಾಡಿ ಪರಸ್ಪರರ ನೆತ್ತರವನ್ನು ಹರಿಸಿಬಿಟ್ಟು ಶಾಂತವಾಗಬೇಕು; ಆದರೆ ಒಂದು ಜಾತಿಯು ಇನ್ನೊಂದು ಜಾತಿಯ ವಿರುದ್ಧ ದೂರು ಹೇಳುವದಕ್ಕಾಗಿ ಸರ್ಕಾರದ ಕಡೆಗೆ ಓಡಿ ಹೋಗುವದು ಸರಿಯಾದುದಲ್ಲ. ಮೇಲಿನ ರೀತಿಯು ಆದರ್ಶಭೂತವಾದುದಲ್ಲ. ಆದರೂ ಇದು

ಪರದೇಶಿ ಸರ್ಕಾರದ ಇಲ್ಲವೆ ಬಾಡಿಗೆ ಮನುಷ್ಯರ ಸಹಾಯದಿಂದ ' ಶಾಂತಿ ' ಯನ್ನು ನೆಲೆಗೊಳಿಸುವದಕ್ಕಿಂತ ಕಡಿಮೆ ದುಃಖದಾಯಕವಾಗಿರುವದು.

೬ ಬಹುಸಂಖ್ಯ ಜಾತಿಯ ನಂಬಿಗೆಯ ವಿಷಯದಲ್ಲಿ ಅಲ್ಪಸಂಖ್ಯ ಜಾತಿಯ ಮನಸ್ಸಿನಲ್ಲಿ ಸಂಶಯವು ಇರುವ ವರೆಗೆ ಬಹುಸಂಖ್ಯ ಜಾತಿಯು ಅಲ್ಪಸಂಖ್ಯ ಜಾತಿಯು ಬೇಡಿದ ಎಲ್ಲ ಜಾಮೀನು ಕೊಡುವದು ಅಲ್ಪಸಂಖ್ಯ ಜಾತಿಯನ್ನು ತನ್ನ ವಶಪಡಿಸಿಕೊಳ್ಳಲಿಕ್ಕೆ ಅತ್ಯಂತ ಉತ್ತಮವಾದ ಉಪಾಯವಾಗಿರುವದು. ಯಾವ ಶರ್ತುಗಳನ್ನು ಸ್ವೀಕರಿಸುವದರಿಂದ ಅಲ್ಪಸಂಖ್ಯ ಜಾತಿಗೆ ನಿರ್ಭಯವೆನಿಸುವದೊ ಅವೆಲ್ಲವುಗಳಿಗೆ ಸಾಧ್ಯವಿದ್ದಷ್ಟು ಹೆಚ್ಚಿಗೆ ಒಪ್ಪಿಗೆಯನ್ನೀಯುವದೆ ಜಾಮೀನು ಎನಿಸುವದು.

೭ ಅಲ್ಪಸಂಖ್ಯ ಜಾತಿಯ ಪ್ರಗತಿಯು ಬಹುಸಂಖ್ಯ ಜಾತಿಯ ಪ್ರಗತಿಗಿಂತ ಕಡಿಮೆಯಾಗಿದ್ದ ಕಡೆಯಲ್ಲಿ ಮಾತ್ರ ಈ ನಿಯಮವು ಹತ್ತುವದು. ಬಹುಸಂಖ್ಯ ಜಾತಿಗಿಂತ ಅಲ್ಪಸಂಖ್ಯ ಜಾತಿಯೆ ಹೆಚ್ಚು ಸಮೃದ್ಧಿಯುಳ್ಳದ್ದೂ ಬಲಿಷ್ಠವಿದ್ದುದೂ ಇದ್ದಲ್ಲಿ ಬಹುಸಂಖ್ಯ ಜಾತಿಯಿಂದ ಹೆಚ್ಚಿನ ಮತ್ತು ವಿಶೇಷತರವಾದ ಅಧಿಕಾರವನ್ನು ಅಲ್ಪಸಂಖ್ಯ ಜಾತಿಗಾಗಿ ಬೇಡುವದು ಸರಿಯಾದುದಲ್ಲ.

೮ ಅಲ್ಪಸಂಖ್ಯ ಜಾತಿಯ ಬಳಿಯಲ್ಲಿ ಹೆಚ್ಚು ಅಧಿಕಾರ, ಧನ, ವಿದ್ಯೆ, ಅನುಭವ ಮುಂತಾದವುಗಳಿದ್ದರೆ ಮತ್ತು ಇದರಿಂದ ಬಹುಸಂಖ್ಯ ಜಾತಿಗೆ ಭಯವೆನಿಸುತ್ತಿದ್ದರೆ ಅಲ್ಪಸಂಖ್ಯ ಜಾತಿಯು ಬಹುಸಂಖ್ಯ ಜಾತಿಯ ಹಿತಕ್ಕಾಗಿ ಪ್ರಾಮಾಣಿಕವಾಗಿ ತನ್ನ ಶಕ್ತಿಯನ್ನು ಉಪಯೋಗಿಸಬೇಕು. ಈ ರೀತಿ ಮಾಡುವದೆ ಅದರ ಧರ್ಮವು. ಯಾವದೆ ತರದ ಶಕ್ತಿಗಳು ಪರರ ಕಲ್ಯಾಣಕ್ಕಾಗಿ ಉಪಯೋಗಿಸಲ್ಪಟ್ಟರೆ ಮಾತ್ರ ಅವು ಪ್ರೋತ್ಸಾಹನಕ್ಕೆ ಪಾತ್ರವಾಗಿರುವವು; ಅವುಗಳ ದುರುಪಯೋಗವು ಆಗತೊಡಗಿದರೆ ಅವನ್ನು ನಷ್ಟಪಡಿಸುವದು ಶ್ರೇಯಸ್ಕರವು ಮತ್ತು ಅವು ಒಂದಿಲ್ಲೊಂದು ದಿನ ನಾಶ ಹೊಂದೇತೀರುವವು.

೯ ಸಾರ್ವಜನಿಕ ಸಂಸ್ಥೆಗಳಲ್ಲಿ ಆಳುಮಕ್ಕಳನ್ನು, ಅಧಿಕಾರಿಗಳನ್ನು ನಿಯಮಿಸುವಾಗ ಜಾತಿಯ ತತ್ವಗಳ ಕಡೆಗೆ ಲಕ್ಷಗೊಡಬಾರದು. ಹೀಗೆ ಮಾಡಿದಲ್ಲಿ ಆಯಾ ಖಾತೆಗಳಲ್ಲಿ ಕೌಶಲ್ಯವು ನಷ್ಟವಾಗುವದು. ಆದ್ದರಿಂದ ನೆಂಟಸ್ತನ, ಜಾತಿ, ಧರ್ಮ ಮೊದಲಾದವುಗಳ ವಿಚಾರವನ್ನು ಮಾಡದೆ ಆ ಕೆಲಸ ಮಾಡುವಷ್ಟು ಯೋಗ್ಯತೆಯು ನಿಯಮಿಸಿಕೊಳ್ಳಲ್ಪಡುವವನಲ್ಲಿ ಇರು

ವದೂ ಹೇಗೆಂಬುದನ್ನಷ್ಟೆ ನೋಡಬೇಕು. ಆಳುಮಕ್ಕಳು ಮುಂತಾದವರನ್ನು ನಿಯಮಿಸಿಕೊಳ್ಳುವಾಗ ಇದೇ ಧೋರಣವನ್ನಿಡಬೇಕು.

೧೦ ಈ ಸಿದ್ಧಾಂತಗಳು ಹಿಂದು-ಮುಸಲ್ಮಾನ-ಸೀಖ್ ಮುಂತಾದ ಜಾತಿಗಳಿಗೆ ಅನ್ವಯಿಸುವವು; ಇದೇ ರೀತಿ ಶ್ರೀಮಂತರು, ಬಡವರು; ಜಮೀನದಾರರು, ಒಕ್ಕಲಿಗರು; ಒಡೆಯರು, ಆಳುಮಕ್ಕಳು; ಬ್ರಾಹ್ಮಣರು, ಬ್ರಾಹ್ಮಣೇತರರು ಮುಂತಾದ ವರ್ಗಗಳಿಗೂ ಅನ್ವಯಿಸುವವು.

## ೪ ಬ್ರಿಟಿಶರೊಡನೆ ಸಂಬಂಧ

೧ ಬ್ರಿಟಿಶ ಸರಕಾರದೊಡನೆ ಹಿಂದುಸ್ತಾನದ ಸಂಬಂಧವು ಯಾವ ತರಹದ್ದಿರಬೇಕೆನ್ನುವದನ್ನು ನಿಶ್ಚಯಿಸುವ ಹಕ್ಕು ಭಾರತೀಯರಿಗೆ ಇರುವದು. ಈ ಅಧಿಕಾರವು ದೊರಕುವ ವರೆಗೆ ಹಿಂದುಸ್ತಾನಕ್ಕೆ ಸ್ವರಾಜ್ಯವು ಸಿಕ್ಕಿತೆಂದು ಹೇಳಲಾಗುವದಿಲ್ಲ.

೨ ಈ ತರದ ಅಧಿಕಾರ ಪಡೆದ ಹಿಂದುಸ್ತಾನದ ಸ್ನೇಹಸಂಬಂಧವು ಬ್ರಿಟಿಶ ಸಾಮ್ರಾಜ್ಯದ ಸಂಗಡ ಇದ್ದರೆ ಅದರಿಂದ ಪೂರ್ಣ ಸ್ವರಾಜ್ಯಕ್ಕೆ ಕೊರತೆ ಕುಂದುಂಟಾಗುವದಿಲ್ಲವೆನ್ನಬಹುದು. ಬ್ರಿಟಿಶ ಸಾಮ್ರಾಜ್ಯದ ಸಂಬಂಧವನ್ನು ನಿರ್ಣಯಿಸುವ ಹಕ್ಕು ಇದ್ದಾಗ ಹಿಂದುಸ್ತಾನಕ್ಕೆ ಸಮಾನವಾದ ಅಧಿಕಾರವಿರುವದು, ಸಾಮ್ರಾಜ್ಯದ ಭಿನ್ನ ಭಿನ್ನವಾದ ಅಂಗಗಳ ಮೇಲೆ ತನ್ನ ವಿಶಾಲ ದೃಷ್ಟಿಯ ಮತ್ತು ದೊಡ್ಡಿಸ್ತಿಕೆಯ ಪ್ರಭಾವವನ್ನು ಸುರಿಸಲನುವು ಇರುವದು.

೩ ಈ ಪ್ರಕಾರವಾಗಿ ಬ್ರಿಟಿಶ ಸಾಮ್ರಾಜ್ಯದೊಳಗಿನ ಎಲ್ಲ ಅಂಗಗಳೊಡನೆ ಹಿಂದುಸ್ತಾನದ ಸಂಬಂಧವು ಬೆಳೆದರೆ ಮತ್ತು ಹಿಂದುಸ್ತಾನವು ಸತ್ಯ ಮತ್ತು ಅಹಿಂಸೆಯನ್ನೇ ಸರ್ವತ್ರ ಹಬ್ಬಿಸುವ ನೀತಿಯುಳ್ಳದ್ದಾದರೆ ಬ್ರಿಟಿಶ ಸಾಮ್ರಾಜ್ಯವು ಜಗತ್ತಿಗೆ ಇಂದಿನಂತೆ ಭಯಾನಕವಾಗಿ ಉಳಿಯಲಾರದು. ಆದರೆ ಅದು ಪ್ರಜರಿಗೆಲ್ಲರಿಗೂ ಅಭಯವನ್ನೀಯುವಂತಹ ಸಾಮ್ರಾಜ್ಯವಾಗುವದು.

೪ ಆದರೆ ಈ ಸ್ಥಿತಿಯು ಬರುವ ಪೂರ್ವದಲ್ಲಿ ಹಿಂದುಸ್ತಾನವು ಇನ್ನೂ ಬಹಳ ಮಾರ್ಗಕ್ರಮಣ ಮಾಡಬೇಕಾಗುವದು. ತನ್ನ ಶಕ್ತಿಯನ್ನೂ ತನ್ನ ಸಂಸ್ಕೃತಿಯನ್ನೂ ಅರಿತುಕೊಂಡು ಅದರಲ್ಲಿ ಸಂಪೂರ್ಣ ಶ್ರದ್ಧೆಯಿಟ್ಟುಕೊಂಡು ಅದನ್ನು ಸಾಧಿಸಿಕೊಳ್ಳಬೇಕು. ಎಲ್ಲಿಯವರೆಗೆ ಹಿಂದುಸ್ತಾನವು ನಿರ್ಬಲವೂ

ಹೇಡಿಯೂ ಆಗಿರುವದೊ ಅಲ್ಲಿಯವರೆಗೆ ಅದಕ್ಕೆ ಈ ತರದ ಸ್ಥಿತಿಯು ಬರುವದು ಅಸಂಭವವು.

೫ ಬ್ರಿಟಿಶ ಸಾಮ್ರಾಜ್ಯವು ಆಸುರೀ ತಂತ್ರವಾಗಿರುವದು. ಇದರ ನಾಶವಾಗುವದೂ ಯೋಗ್ಯವಾದದ್ದು ಇದು ನಿಜವು. ಆದರೆ ಬ್ರಿಟಿಶ ಸಾಮ್ರಾಜ್ಯವೂ ಬ್ರಿಟಿಶ ಪ್ರಜರೂ ಒಂದೇ ಆಗಿರದೆ ಭಿನ್ನ ಭಿನ್ನವಾಗಿರುವರು. ಬ್ರಿಟಿಶ ಜನಾಂಗವು ಜಗತ್ತಿನ ಅಥವಾ ಯುರೋಪಖಂಡದ ಬೇರೆ ಜನಾಂಗಗಳಿಗಿಂತ ಹೆಚ್ಚು ದುಷ್ಟವಾದದ್ದೂ ಸದ್ಗುಣರಹಿತವಾದದ್ದೂ ಇರುವದಿಲ್ಲ. ಆ ಜನಾಂಗದಲ್ಲಿಯೂ ಸನ್ಮಾನನೀಯ ಮತ್ತು ಅನುಕರಣೀಯುವಾದ ಸದ್ಗುಣಗಳಿರುವವು. ಆದರೆ ಇಂದಿನ ವಿಷಮ ಪರಿಸ್ಥಿತಿಯಲ್ಲಿ ಅದರೊಡನೆ ಇರುವ ನಮ್ಮ ವಿಷಮ ಸಂಬಂಧದಿಂದ ಅದರ ಗುಣಗಳನ್ನು ಸನ್ಮಾನಿಸಲು ನಾವು ಅಸಮರ್ಥರಾಗಿದ್ದುದು ದುರ್ಭಾಗ್ಯವೆ ಸರಿ.

೬ ಹಿಂದುಸ್ತಾನವು ಸ್ವರಾಜ್ಯವನ್ನು ಗಳಿಸಿಕೊಂಡ ಬಳಿಕ ಅದರಲ್ಲಿ ಇಂಗ್ಲೀಷರೂ ಭಾರತದ ಬೇರೆ ಜಾತಿಗಳಂತೆ ವಾಸಿಸಬಲ್ಲರು, ಹಿಂದುಸ್ತಾನದ ಬೇರೆ ಬೇರೆ ಜಾತಿಗಳಂತೆ ಅವರೂ ಭಾರತೀಯರಾಗಿ ದೇಶಸೇವೆಯಲ್ಲಿ ಭಾಗ ತೆಗೆದುಕೊಳ್ಳಬಲ್ಲರು, ಮತ್ತು ಕೊನೆಯ ಪ್ರಕರಣದಲ್ಲಿ ಹೇಳಿದ ಸಿದ್ಧಾಂತಗಳ ಮೇರೆಗೆ ಅವರ ಮತ್ತು ಹಿಂದುಸ್ತಾನದ ಬೇರೆ ಜಾತಿಗಳ ಸಂಬಂಧವಿರಬಲ್ಲದು. ಆದರೆ ಇಂಗ್ಲೀಷರು ಪರದೇಶೀಯರಾಗಿಯೆ ವಾಸಿಸಲು ಅಪೇಕ್ಷಿಸಿದರೆ ಅವರು ಹಿಂದುಸ್ತಾನಕ್ಕೆ ಅನುಕೂಲವಿರುವ ನಿಯಮಗಳಿಗೆ ಬದ್ಧರಾಗಿದ್ದುಕೊಂಡೆ ನೋಕರಿಯನ್ನು ಮಾಡಬಲ್ಲರು.

## ೫ ದೇಶೀ ರಾಜ್ಯಗಳು

೧ ಇವತ್ತು ದೇಶೀರಾಜ್ಯಗಳು ತಮ್ಮ ಪರಾಕ್ರಮದಿಂದ ಜೀವಿಸಿಕೊಂಡಿರದೆ ಬ್ರಿಟಿಶ ರಾಜ್ಯದ ಆಶ್ರಯದಿಂದ ಬದುಕಿಕೊಂಡಿರುವವು. ಬ್ರಿಟಿಶ ರಾಜ್ಯವು ಅಳಿದರೆ ತಾವು ಬದುಕುವದಿಲ್ಲವೆಂಬ ಹೆದರಿಕೆಯು ಇವುಗಳಿಗೆ ಎನಿಸತೊಡಗಿದೆ. ಆದ್ದರಿಂದ ಅವು ಬ್ರಿಟಿಶ ರಾಜ್ಯವನ್ನು ಸಂರಕ್ಷಿಸುವದಕ್ಕಾಗಿ ಬ್ರಿಟಿಶ ಪ್ರಜೆಗಿಂತಲೂ ಹೆಚ್ಚು ಆಸ್ಥೆಯನ್ನು ತೋರಿಸಲು ಹೆಣಗುತ್ತಿವೆ.

೨ ಈ ಬಗೆಯ ಹೆಚ್ಚು ಆಸ್ಥೆಯನ್ನು ತೋರಿಸುವದು ಹೆಚ್ಚು ಗುಲಾಮಿಯ ದ್ಯೋತಕವಾಗಿರುವದು. ಈ ಆಸ್ಥೆಯಲ್ಲಿ ಶುದ್ಧವಾದ ಭಕ್ತಿ ಇರುವದಿಲ್ಲ, ಆದರೆ ತಪ್ಪುತಿಳಿವಳಿಕೆಯಿಂದ ಕೂಡಿದ ಅಶುದ್ಧವಾದ ಸ್ವಾರ್ಥವಿದೆ.

೩ ಆದ್ದರಿಂದ ದೇಶೀರಾಜ್ಯಗಳ ಪ್ರಜರ ಸ್ಥಿತಿಯು ಬ್ರಿಟಿಶ ಪ್ರಜರಿಗಿಂತ ಇಮ್ಮಡಿ ದಾಸ್ಯಪೂರ್ಣವಿರುವದು. ಗುಲಾಮಗಿರಿಯಲ್ಲಿ ಗುಲಾಮರ ಹಿರಿಯನು ತನ್ನ ಒಡೆಯನಿಗಿಂತ ಹೆಚ್ಚು ಕಠೋರತೆಯನ್ನು ತೋರಿಸುವಂತೆ ದೇಶೀ ರಾಜರು ತಮ್ಮ ಪ್ರಜರೊಡನೆ ಹೆಚ್ಚು ಕಠೋರತೆಯಿಂದ ವರ್ತಿಸುವರು. ಇದೇನೂ ಆಶ್ಚರ್ಯವಾದ ಸಂಗತಿಯಲ್ಲ.

೪ ಈ ಪರಿಸ್ಥಿತಿಯನ್ನು ಹೋಗಲಾಡಿಸಬೇಕಾದರೆ ಬ್ರಿಟಿಶ ಭಾರತೀಯರು ಮೊದಲು ಸ್ವರಾಜ್ಯವನ್ನು ಸಂಪಾದಿಸಬೇಕು. ಇದೇ ಅದಕ್ಕೆ ಉತ್ತಮ ಮಾರ್ಗವು. ಹಿಂದುಸ್ತಾನದ ಬ್ರಿಟಿಶ ಪ್ರಜೆಗಳು ಸ್ವತಂತ್ರವಾಗುವ ವರೆಗೆ ಅವರಿಗೆ ದೇಶೀರಾಜ್ಯಗಳ ಪ್ರಜೆಗಳ ಸಂಕಟಗಳನ್ನು ನಿವಾರಿಸುವ ಶಕ್ತಿಯು ಬರುವದಿಲ್ಲ. ತಮ್ಮ ಶಕ್ತಿಸಾಮರ್ಥ್ಯಗಳಿಂದ, ಪುರುಷಾರ್ಥದಿಂದ ಬ್ರಿಟಿಶ ಹಿಂದುಸ್ತಾನದ ಪ್ರಜೆಗಳು ಸ್ವತಂತ್ರರಾದರೆ ಮಾತ್ರ ದೇಶೀರಾಜರ ಕಣ್ಣು ತೆರೆಯುವವು. ಆಗ ಬ್ರಿಟಿಶರ ಕತ್ತಿಯ ಮೊನೆಯಿಂದ ತಮ್ಮ ಪ್ರಜೆಗಳನ್ನು ಹತ್ತಿಟ್ಟು ಅಲ್ಪ ಸ್ವಲ್ಪ ಅಧಿಕಾರವನ್ನೂ ವಿಷಯಸುಖವನ್ನೂ ಈಗಿನಂತೆ ಪಡೆಯುವದಕ್ಕಿಂತ ತನು-ಮನ-ಧನದಿಂದ ಪ್ರಜರ ಸೇವೆ ಮಾಡಿ, ಅವರ ಸುಖದುಃಖಗಳಲ್ಲಿ, ಬಡತನದಲ್ಲಿ ಸಮಭಾಗಿಗಳಾಗಿ ಪ್ರೀತಿಯಿಂದ ಅವರ ಹೃದಯದ ಮೇಲೆ ಅಧಿಕಾರ ನಡೆಸುವದರಲ್ಲಿ ಮಾತ್ರ ತಮ್ಮ ಹಿರಿದಾದ ಶ್ರೇಯಸ್ಸಿರುವದೆಂದು ದೇಶೀರಾಜರ ಮನವರಿಕೆಯಾಗುವದು.

೫ ಈ ಪ್ರಕಾರ ಎಚ್ಚತ್ತ ದೇಶೀರಾಜರು ತಮ್ಮ ರಾಜ್ಯಗಳಲ್ಲಿ ತಾವೇ ಸುಧಾರಣೆಗಳನ್ನು ಮಾಡಲುಪಕ್ರಮಿಸುವರು. ಆಗ ಕೂಡ ದೇಶೀರಾಜರು ಎಚ್ಚತ್ತಾಗದಿದ್ದರೆ ಅವರ ರಾಜ್ಯಗಳು ಬದುಕಲಾರವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಆಗ ಆ ತರದ ಜಡಭರತ ರಾಜರು ಸಹ ಸ್ವಚ್ಛಂದವಾಗಿ ಇರಲಾರರು;_ ಏಕೆಂದರೆ ಸ್ವಾತಂತ್ರ್ಯವನ್ನು ಪಡೆದ ಬ್ರಿಟಿಶ ಹಿಂದುಸ್ತಾನದ ಮತ್ತು ಸುಧಾರಿಸಿದ ದೇಶೀರಾಜ್ಯಗಳ ಒಟ್ಟಾರೆ ಪ್ರಜಾಮತವು ಅತ್ಯಂತ ಬಲಶಾಲಿಯಾಗುವದು. ಆಗ ಅತಿ ದುಷ್ಟರು ಸಹ ತಮ್ಮ ದುಷ್ಟತನಕ್ಕೆ ತಿಲಾಂಜಲಿಯನ್ನಿತ್ತು ಬೆದರಿಕೊಂಡಿರಬೇಕಾಗುವದು, ಇಲ್ಲದಿದ್ದರೆ ಅವರು ಇರಲಾರರು.

೬ ಬಲಶಾಲಿಯಾದ ಮತ್ತು ಸ್ವತಂತ್ರವಿದ್ದ ಶಿಕ್ಷಿತ ಪ್ರಜರ ಸಂಘಟಿತ ಲೋಕಮತದಲ್ಲಿ ಎಷ್ಟು ಸಾಮರ್ಥ್ಯವಿರುವದೆಂಬುದರ ಅನುಭವವು ನಮಗೆ

ಸಾಮಾಜಿಕ ವ್ಯವಹಾರಗಳಲ್ಲಿ ಬಂದಾಗ್ಯೂ ನಾವು ಅದನ್ನು ಮರೆತುಬಿಟ್ಟಿರುವೆವು. ಪಶುಬಲದ ಆಧಾರದಿಂದಲೆ ಅಧಿಕಾರವನ್ನು ನಡೆಯಿಸುವ ಪ್ರಭುತ್ವಗಳು ಕೂಡ ಪ್ರಜಾಮತವು ಅತ್ಯಂತ ಸಾಮರ್ಥ್ಯವುಳ್ಳದ್ದಾಗುವ ವರೆಗೆ ಮಾತ್ರ ಪಶುಬಲದ ಸಹಾಯದಿಂದ ಬದುಕಿಕೊಂಡಿರುವವು. ಅತ್ಯಂತ ಬಲಿಷ್ಠ ಪ್ರಜಾಮತದ ಎದುರಿನಲ್ಲಿ ಅತ್ಯಂತ ವಿಶಾಲವಾದ ಬಲಿಷ್ಠವಾದ ಸಾಮ್ರಾಜ್ಯವೂ ಕತ್ತನ್ನು ಬಾಗಿಸಬೇಕಾಗುವದು.

೭ ಪ್ರಜಾಮತವು ಅತ್ಯಂತ ಬಲಿಷ್ಠವಾಗಿರುವದೆಂದು ಅದರ ಕೈಯೊಳಗಿದ್ದ ಒಂದೇ ಒಂದಾದ ಅಜೇಯ ಸತ್ಯಾಗ್ರಹ-ಶಸ್ತ್ರವು ತೋರಿಸಿಕೊಡುವದು. ತನ್ನ ಮತಕ್ಕಾಗಿ ಪ್ರಾಣಾರ್ಪಣ ಮಾಡಲು ಸಿದ್ಧವಿದ್ದ ಪ್ರಜರ ಎದುರಿನಲ್ಲಿ ಹೆಚ್ಚಿನ ಜಂಬ ಬಡೆಯುವ ಮುಕುಟಧಾರಿಗಳಿಗೂ ತಲೆಬಾಗಿಸಿದವಿನಾ ಗತ್ಯಂತರವಿಲ್ಲ.

## ೬ ದೇಶದ ಸಂರಕ್ಷಣೆ

೧ ಸ್ವರಾಜ್ಯವನ್ನು ಪಡೆದ ಮೇಲೆ ತನ್ನ ದೇಶವನ್ನು ಸಂರಕ್ಷಿಸಿಕೊಳ್ಳುವಷ್ಟು ಬಲವು ಹಿಂದುಸ್ತಾನದಲ್ಲಿ ಇರುವದಿಲ್ಲವೆಂದು ಅನ್ನುವದು ತೀರ ತಪ್ಪಾದುದು.

೨ ಅಹಿಂಸಾಧರ್ಮವನ್ನು ಚೆನ್ನಾಗಿ ಅರಿತುಕೊಂಡು ಅದರಂತೆ ವರ್ತಿಸುವ ಜನಾಂಗಕ್ಕೆ ದೇಶದ ಸಂರಕ್ಷಣೆಯನ್ನು ಮಾಡುವದಕ್ಕಾಗಿ ತೋಫು-ತುಬಾಕಿ ಮುಂತಾದ ಸೈನಿಕ ಸರಕುಗಳ ಅವಶ್ಯಕತೆಯೇ ಇಲ್ಲ. ಆದರೆ ಈ ಸ್ಥಿತಿಯು ಸದ್ಯಕ್ಕಂತೂ ಕೇವಲ ಕಲ್ಪನೆಯಲ್ಲಿರುವಂತಹದು.

೩ ಹೀಗಿದ್ದಾಗ್ಯೂ ಸ್ವತಂತ್ರವಾದ ಮತ್ತು ಅನ್ಯ ರಾಜ್ಯಗಳ ಕೂಡ ಸಹಕಾರದಿಂದ ವರ್ತಿಸುವಂಥ ಮತ್ತು ಪರರಾಷ್ಟ್ರಗಳ ಉಪಜೀವನದ ವಸ್ತುಗಳ ಮೇಲೆ ಆಕ್ರಮಣ ಮಾಡಬಾರದೆಂಬ ಧೋರಣವನ್ನಿಟ್ಟುಕೊಂಡಂಥ ಹಿಂದುಸ್ತಾನಕ್ಕೆ ಈಗಿನಂತಹ ಮತ್ತು ಈಗಿರುವಷ್ಟು ಸೈನ್ಯವು ಮತ್ತು ಸೈನ್ಯದ ಸರಕುಗಳು ಬೇಕಾಗುವದಿಲ್ಲ.

೪ ಸ್ವರಾಜ್ಯದಲ್ಲಿ ವಿಶಿಷ್ಟ ನಿಯಮಗಳಿಗೆ ಒಳಗಾಗಿ ಮಿತಿಯಲ್ಲಿ ಶಸ್ತ್ರಾಸ್ತ್ರಗಳನ್ನು ಇಡುವ ಹಕ್ಕು ಪ್ರತಿಯೊಬ್ಬ ಯೋಗ್ಯ ಮನುಷ್ಯನಿಗೆ ಉಂಟು. ತನ್ನ ಮೇಲೆ ಪರರು ಆಕ್ರಮಣ ಮಾಡುವರೆಂಬ ಹೆದರಿಕೆಯಿಂದಲೆ ಸ್ವರಾಜ್ಯದ ಕಾರಭಾರವು ನಡೆಯುವದೆಂದು ತಿಳಿಯಕೂಡದು. ಆದರೆ ಮುಂದೆ

ಆಕಸ್ಮಾತ್ತಾಗಿ ಆಗುವ ಆಕ್ರಮಣವನ್ನು ಅಥವಾ ಸಂಕಟಗಳನ್ನು ಪ್ರಥಮ ದಲ್ಲಿಯೇ ದೂರೀಕರಿಸುವದಕ್ಕಾಗಿ ಬೇಕಾಗುವಷ್ಟು ಸೈನ್ಯವನ್ನೂ ಯುದ್ಧದ ಸಾಮುಗ್ರಿಗಳನ್ನೂ ಹಿಂದುಸ್ತಾನವು ಸಂಗ್ರಹಿಸಿ ಇಟ್ಟುಕೊಂಡಿರುವದು. ಮುಂದೆ ಪ್ರಸಂಗ ಬಂದರೆ ಇಡೀ ದೇಶವನ್ನೆ ಕ್ಷಣದಲ್ಲಿ ಸಜ್ಜುಗೊಳಿಸುವ ಆಶೆ ಯನ್ನಿಟ್ಟುಕೊಂಡಿರುವದು.

೫ ಕಾಯಿದೆಯ ಮತ್ತು ಅಧಿಕಾರಿಗಳ ದಾರಿಯನ್ನು ಕಾಯದೆ ಜನರು ತಾವೇ ಜಾಗ್ರತರಾಗಿ ತಮ್ಮ ದೇಶದ ಕಾರಭಾರವನ್ನು ಸಾಗಿಸಿಕೊಂಡು ಹೋಗುವಂತಹ ಶಿಕ್ಷಣವನ್ನು ಕೊಡಿಸುವ ಏರ್ಪಾಡು ಮಾಡಿದರೆ ಮತ್ತು ಅದರಲ್ಲಿ ಯಶಸ್ಸು ದೊರೆತರೆ ಜನತೆಯ ಸೇವೆಯನ್ನೆ ತಮ್ಮ ಜೀವನದ ಗುರಿಯಾಗಿಟ್ಟುಕೊಂಡ ಮತ್ತು ಜನತೆಯ ಸುಖದ ಸಲುವಾಗಿ ತಮ್ಮ ಸರ್ವಸ್ವ ವನ್ನೆ ಸೂರೆ ಮಾಡಲು ಸಿದ್ಧರಾದ ಸ್ವಯಂಸೇವಕರ ಅನೇಕ ಮಂಡಲಗಳು ಹುಟ್ಟುವವು. ಈ ಮಂಡಲಗಳು ಕೇವಲ ಯುದ್ಧಪ್ರಿಯ ಕ್ಷತ್ರಿಯ ವರ್ಗ ಗಳಾಗುವದಿಲ್ಲ. ಆದರೆ ಅವು ಪ್ರಜೆಗಳಿಗೆ ಶಿಕ್ಷಣವನ್ನು ಕೊಟ್ಟು ಅವರಲ್ಲಿ ಒಂದು ಸುವ್ಯವಸ್ಥೆಯನ್ನು ತರುವಂಥ, ಪ್ರಜೆಗಳ ವ್ಯವಹಾರವು ಸರಾಗವಾಗಿ ಸಾಗುವಂತೆ ಮಾಡಿ ಅವರನ್ನು ಸುಖಿಗಳನ್ನಾಗಿಯೂ ಸಂತೋಷಪಡು ವಂತೆಯೂ ಮಾಡುವಂಥ ವರ್ಗಗಳು ಆಗುವವು. ದೇಶಕ್ಕೆ ಏನಾದರೂ ಸಂಕಟ ಒದಗಿದರೆ ಮೊದಲಿನ ಪೆಟ್ಟು ಈ ಮಂಡಲಗಳಿಗೆ ಬೀಳುವದು.

೬ ತನ್ನ ದೇಶದ ಸೈನ್ಯಕ್ಕೆ ತಾನೇ ಅಂಜುವಂತಹ ಸ್ಥಿತಿ ಇದ್ದರೆ ಮತ್ತು ತಮ್ಮ ಮೇಲೆಯೆ ಸೈನ್ಯದ ತುಬಾಕಿಗಳು ಹಾರುವವೆಂದು ಪ್ರಜರಿಗೆ ಎನಿಸಿದರೆ ಅದು ಸ್ವರಾಜ್ಯ ಅಥವಾ ರಾಮರಾಜ್ಯವಲ್ಲ. ಆದರೆ ಅದು ರಾಕ್ಷಸೀ ರಾಜ್ಯವು. ಆ ರಾಜ್ಯದ ವಿರೋಧ ಮಾಡುವದೂ ಸತ್ಯಾಗ್ರಹಿಯ ಧರ್ಮವೆ ಆಗಿರುವದು.

೭ ಯಾವ ಸೈನಿಕನು ಜನತೆಯ ಸ್ನೇಹಿತನೂ ಪ್ರಾಣವನ್ನಿತ್ತು ಅವ ರನ್ನು ಸಂಕಟಗಳಿಂದ ಕಾಪಾಡುವವನೂ ಇರುವನೊ ಅವನೇ ಕ್ಷತ್ರಿಯನು. ಯಾವನು ಪ್ರಜರನ್ನು ಹೆದರಿಸುವವನೂ ಶಾರೀರಿಕ ಬಲದಿಂದ ಇಲ್ಲವೆ ಶಸ್ತ್ರ ಗಳ ಬಲದಿಂದ ಪೀಡಿಸುವವನೂ ಇರುವನೊ ಅವನು ಲೂಟಿಗಾರನು. ಇಂಥ ಸೈನಿಕನಿಗೆ ಆಶ್ರಯಕೊಟ್ಟ ರಾಜ್ಯವು ಲೂಟಿಗಾರ ರಾಜ್ಯವೆನಿಸುವದು.

**ಟೀಪು: ಇದು ಈ ಹೊತ್ತು ಕಾಂಗ್ರೆಸ್ಸಿನ ಭೂಮಿಕೆ. ಗಾಂಧೀಜಿಯವರು ಸತ್ಯಾಗ್ರಹಪೂರ್ವಕವಾಗಿಯೆ ಸಂರಕ್ಷಣೆ ಮಾಡಿಕೊಳ್ಳಬೇಕೆನ್ನುವರು.**

## ಷಷ್ಠ ಖಂಡ

# ವಾಣಿಜ್ಯ

### ೧ ಪಾಶ್ಚಾತ್ಯ ಅರ್ಥಶಾಸ್ತ್ರ

೧ ಪಾಶ್ಚಾತ್ಯ ಅರ್ಥಶಾಸ್ತ್ರವು ಸರ್ವೋಚ್ಚ ವಿಚಾರದೃಷ್ಟಿ ಬಿಂದುಗಳಿಂದ ರಚಿಸಲ್ಪಟ್ಟಿರುವದಿಲ್ಲ. ಆದ್ದರಿಂದ ಅದು ಅರ್ಥಶಾಸ್ತ್ರವಿರದೆ ಅನರ್ಥಶಾಸ್ತ್ರವಾಗಿರುವದು. ಅದರ ದೃಷ್ಟಿಕೋನವು ತಪ್ಪಿರುವದು.

೨ ಈ ತಪ್ಪು ದೃಷ್ಟಿಬಿಂದುಗಳು ಕೆಳಗೆ ಕಾಣಿಸಿದಂತೆ ಇರುವವು :

೧) ನಾನಾತರದ ಭೋಗಗಳನ್ನು ಹೆಚ್ಚಾಗಿ ಭೋಗಿಸುವದೆ ಸಂಸ್ಕೃತಿಯ ಪ್ರಾಣವೆಂದು ಇದು ತಿಳಿದಿರುತ್ತದೆ.

೨) ಸರ್ವ ದೇಶಗಳಿಗೆ ಸರ್ವ ಕಾಲದಲ್ಲೂ ಉಪಯೋಗಕ್ಕೆ ಬರುವಂಥ ಆಚರಣೆಯಲ್ಲಿ ತರಬಲ್ಲಂಥ ಸಿದ್ಧಾಂತಗಳ ಸಾರವನ್ನು ತೆಗೆದುಕೊಂಡಿರುತ್ತೇನೆಂದು ಇದು ಹೆಮ್ಮೆಪಡುತ್ತದೆ; ಆದರೆ ನಿಜವಾಗಿಯೂ ಯುರೋಪ ಖಂಡದ ತಂಪು ಮತ್ತು ಒಕ್ಕಲತನಕ್ಕಾಗಿ ಕಡಿಮೆ ಅನುಕೂಲತೆಗಳುಳ್ಳ ಚಿಕ್ಕ-ಚಿಕ್ಕ ಅನೇಕ ದೇಶಗಳಲ್ಲಿ, ಜನಸಂಖ್ಯೆಯು ಹೆಚ್ಚಾಗಿದ್ದರೂ ಹಿಡಿತುಂಬ ಜನರ ಇಲ್ಲವೆ ಅತ್ಯಂತ ಕಡಿಮೆ ಜನವಸತಿಯಿದ್ದ ಬೆಳೆಯುಳ್ಳ ಭೂಮಿಯಿದ್ದ ದೊಡ್ಡ ಖಂಡಗಳಲ್ಲಿ ಬಂದ ಅನುಭವದಿಂದ ಇದರ ಉದ್ಭವವಾಗಿದೆ.

೩) (ಕ) ಇದು ವ್ಯಕ್ತಿಗೆ, ಒಂದು ವರ್ಗಕ್ಕೆ, ಬಹಳವಾದರೆ ತನ್ನ ಚಿಕ್ಕ ದೇಶಕ್ಕೆ ಮಾತ್ರ ಆರ್ಥಿಕ ಲಾಭವನ್ನು ಮಾಡಿಕೊಡುವದೆ, ತನ್ನ ದೇಶದ ಹಿತವನ್ನು ಬಯಸುವದೆ ತನ್ನ ನೀತಿಯು ಮತ್ತು ಇದೇ ಅರ್ಥಶಾಸ್ತ್ರದ ಅಟಲವಾದ ಸಿದ್ಧಾಂತವು ಎಂದು ಹೇಳುತ್ತದೆ, ಮತ್ತು ಅದರಂತೆ ಎಲ್ಲರೂ ವರ್ತಿಸಬೇಕೆಂದು ಒತ್ತಾಯಪಡಿಸುತ್ತದೆ. ಹಾಗೂ (ಖ) ಇದು ಇನ್ನೂ ಪ್ರಾಚೀನ ಕಾಲದಂತೆ ಬೆಲೆಯುಳ್ಳ ಧಾತುಗಳಿಗೆ ಮಿತಿಮೀರಿದ ಮಹತ್ವವನ್ನು ಕೊಡುತ್ತದೆ. ಈ ಮಾತುಗಳನ್ನೆಲ್ಲ ಈ ಶಾಸ್ತ್ರವು ತನ್ನ ಪುಸ್ತಕಗಳಲ್ಲಿ ಖಂಡಿಸಿದಾಗ್ಯೂ ಯೋಜನೆಯಲ್ಲಿಯೂ ವ್ಯವಹಾರದಲ್ಲಿಯೂ ಇನ್ನೂ ಆ ನೀತಿಯನ್ನೆ ಅವಲಂಬಿಸುತ್ತದೆ.

೪) ಅರ್ಥ ಮತ್ತು ನೀತಿ ಧರ್ಮದಲ್ಲಿದ್ದ ಸಂಬಂಧವನ್ನು ಕಡಿದು ಹಾಕಿದ್ದರಿಂದ ಈ ಶಾಸ್ತ್ರವು ದುಡ್ಡಿಗಿಂತಲೂ ಹೆಚ್ಚು ಶ್ರೇಷ್ಠವಿದ್ದ ಜೀವನದ ವಿಷಯಗಳನ್ನು ತುಚ್ಛೀಕರಿಸುವ ರೂಢಿಯನ್ನು ಕಲಿಸಿದೆ.

೩ ಇವುಗಳ ಪರಿಣಾಮವು ಇಂತಾಗಿದೆ:

೧) ಈ ಅರ್ಥಶಾಸ್ತ್ರವು ಯಂತ್ರ, ಪಟ್ಟಣ ಹಾಗೂ (ಒಕ್ಕಲತನಕ್ಕಿಂತಲೂ) ಉದ್ಯೋಗಗಳ ಕುರುಡ-ಪೂಜಾರಿಯಾಗಿದೆ.

೨) ಜನತೆಯ ವರ್ಗ-ವರ್ಗಗಳಲ್ಲಿ ಮತ್ತು ದೇಶ-ದೇಶಗಳಲ್ಲಿ ಏಕಭಾವವನ್ನುಂಟುಮಾಡದೆ ವಿರೋಧವನ್ನು ಹೆಚ್ಚಿಸಿದೆ, ಮತ್ತು ಸರ್ವೋದಯವನ್ನು ಸಾಧಿಸದೆ ಸ್ವಲ್ಪ ಜನರಿಗೆ ಅಲ್ಪ ಸಮಯದ ವರೆಗೆ ಮಾತ್ರ ಲಾಭವನ್ನು ದೊರಕಿಸಿಕೊಡುವ ವ್ಯವಸ್ಥೆ ಮಾಡಿದೆ.

೩) ಹಿಂದುಳಿದವೆಂದು ಎನಿಸುವ ರಾಷ್ಟ್ರಗಳಲ್ಲಿ ಪ್ರವೇಶಮಾಡಿ ಅಲ್ಲಿಯ ಧನವನ್ನು ಅಪಹರಿಸಿ, ಅಲ್ಲಿಯ ಜನರನ್ನು ವ್ಯಸನ ಕೂಪಗಳಲ್ಲಿ ನೂಕಿ, ಅವರ ನೀತಿಯನ್ನು ಕೆಡಿಸಿ ತನ್ನ ಸಮೃದ್ಧಿಯ ಮಾರ್ಗವನ್ನು ಶೋಧಿಸುತ್ತಿದೆ.

೪) ಈ ಅರ್ಥಶಾಸ್ತ್ರದಂತೆ ನಡೆಯುವ ಪ್ರಜರು ಪಶುಬಲದ ಸಹಾಯದಿಂದ ಜೀವಿಸುತ್ತಿರುವರು.

೫) ಶಾಸ್ತ್ರೀಯ ಸಿದ್ಧಾಂತಗಳ ಹೆಸರಿನಲ್ಲಿ ಈ ಶಾಸ್ತ್ರವು ಹುಟ್ಟಿಸಿದ ಭ್ರಾಮಕ ಕಲ್ಪನೆಗಳು ಧಾರ್ಮಿಕ ಇಲ್ಲವೆ ಭೂತಾದಿ ಭ್ರಮೆಗಳಿಗಿಂತಲೂ ಕಡಿಮೆ ಬಲಿಷ್ಠವಿರುವದಿಲ್ಲ.

## ೨ ಭಾರತೀಯ ಅರ್ಥಶಾಸ್ತ್ರ

೧ ಕೆಲವು ವಿಷಯಗಳನ್ನು ಒಂದು ಬದಿಗಿಟ್ಟರೂ ಹಿಂದುಸ್ತಾನವು ಅತ್ಯಂತ ವಿಶಾಲವಾದ ದೇಶವು. ಇದರ ಹವೆಯೂ ನೀರೂ ನಾನಾ ಬಗೆಯದ್ದು, ಭೂಮಿಯು ನಾನಾ ಪ್ರಕಾರದ್ದು. ಸಾವಿರಾರು ವರ್ಷಗಳ ಬಳಿಕೆ ಹಾಗೂ ಜನತೆಯ ಬಡತನದಿಂದ ಅದರ ಬೆಳಿಕೆಯು ಕಡಿಮೆಯಾಗಿಬಿಟ್ಟಿದೆ. ಮಾನವ ಜಾತಿಯ ೧/೫ ಜನತೆಯು ಭಾರತದಲ್ಲಿದ್ದು ಅದು ಚಿಕ್ಕ ಚಿಕ್ಕ ಹಳ್ಳಿಗಳಲ್ಲಿ ಹರಡಿಕೊಂಡಿದೆ. ಇದರಲ್ಲಿ ನಾನಾ ಧರ್ಮ, ಸಂಸ್ಕೃತಿ, ಸ್ವಭಾವ ಹಾಗೂ ನಡತೆ ನಡಾವಳಿಯ ವೈವಿಧ್ಯವುಂಟು. ಪಾಶ್ಚಾತ್ಯ ಅರ್ಥಶಾಸ್ತ್ರದ

ಗುಟ್ಟುಗುರಿಗಳನ್ನು ಮುಂದಿಟ್ಟುಕೊಂಡು ಭಾರತೀಯ ಅರ್ಥಶಾಸ್ತ್ರದ ವಿಚಾರ ಮಾಡಬಾರದೆಂದು ಹೇಳಲು ಈ ಮೇಲ್ಕಂಡ ಕಾರಣಗಳು ಸಾಕಷ್ಟಿರುವವು.

೨ ಭಾರತೀಯ ಅರ್ಥಶಾಸ್ತ್ರದಲ್ಲಿ ಈ ಮುಖ್ಯ ಗುಣಗಳಿರಬೇಕು :

೧) ಇದರ ಸಿದ್ಧಾಂತಗಳು ಹಳ್ಳಿಗಳ ದೃಷ್ಟಿಯಿಂದ ವಿಚಾರಿಸಲ್ಪಟ್ಟಿರಬೇಕು.

೨) ಇದು ಒಕ್ಕಲತನ ಮತ್ತು ಉದ್ಯೋಗಗಳಲ್ಲಿ ಬಾಂಧವ್ಯವನ್ನು ಸ್ಥಾಪಿಸಬೇಕು. ಒಕ್ಕಲತನ ಮತ್ತು ಉದ್ಯೋಗ ಎರಡೂ ಒಂದೇ ನೆರಳಿನಲ್ಲಿ ಬೆಳೆಯಬೇಕು.

೩) ನಾನಾ ಧರ್ಮ, ಸಂಸ್ಕಾರ, ಸ್ವಭಾವಗಳ ಜನರಲ್ಲಿ ಮತ್ತು ವರ್ಗಗಳಲ್ಲಿ ಅನುಚಿತವಾದ ಹೋರಾಟ-ಮೇಲಾಟ, ಕೇಡು-ಕ್ಲೇಶಗಳು ಉತ್ಪನ್ನವಾಗಕೂಡದೆಂಬ ಧೋರಣದಿಂದ ಇದು ವಿಚಾರಿಸಲ್ಪಟ್ಟದ್ದಿರಬೇಕು.

೪) ಆದ್ದರಿಂದ ಇದು ನೀತಿಧರ್ಮವನ್ನು ಅಡಿಗಡಿಗೆ ತನ್ನೆದುರಿನಲ್ಲಿ ಇಟ್ಟುಕೊಂಡು ಜನತೆಯ ಸರ್ವೋದಯವನ್ನು ಮಾಡಲು ಯತ್ನಿಸಬೇಕು.

## ೩ ಗ್ರಾಮದೃಷ್ಟಿ

೧ ಹಿಂದುಸ್ತಾನದ ಪ್ರಾಣವು ಹಳ್ಳಿಗಳಲ್ಲಿದೆಯೆನ್ನುವದು ಸರ್ವಮಾನ್ಯವಿರುವದು. ಆದರೆ ಹಿಂದುಸ್ತಾನದ ಆರ್ಥಿಕ ಯೋಜನೆಗಳು ಹಳ್ಳಿಗಳ ಹಿತಕ್ಕಾಗಿ ಮಾಡಲ್ಪಡದೆ ಪಟ್ಟಣಗಳ ಮತ್ತು ಪರದೇಶಗಳ ಕಲ್ಯಾಣಕ್ಕಾಗಿ ಮಾಡಲ್ಪಡುತ್ತ ಇವೆ.

೨ ಇದರಿಂದ ಹಳ್ಳಿಯ ಕಚ್ಚಾ ಮಾಲು ಪಟ್ಟಣಕ್ಕೂ ಪಟ್ಟಣದಿಂದ ಪರದೇಶಕ್ಕೂ ಹೋಗುವದು; ಪಟ್ಟಣಗಳಲ್ಲಿಯೂ ಪರದೇಶಗಳಲ್ಲಿಯೂ ತಯಾರಿಸಲ್ಪಟ್ಟ ಪಕ್ಕಾ ಮಾಲು ಹಳ್ಳಿಗಳಲ್ಲಿ ಮಾರಲಾಗುವದು. ಇದರಿಂದ ಕಚ್ಚಾ ಮಾಲಿನಿಂದ ಬಂದ ಸ್ವಲ್ಪ ಹಣವು ಪಕ್ಕಾ ಮಾಲು ಕೊಳ್ಳುವದರಲ್ಲಿ ವೆಚ್ಚವಾಗುವದು. ಮತ್ತು ಹಳ್ಳಿಗನ ಕೈಯು ಬರಿದಾಗಿಯೆ ಉಳಿಯುವದು.

೩ ಜೀವನಕ್ಕೆ ಬೇಕಾಗುವ ಎಷ್ಟೋ ವಸ್ತುಗಳು ಹಳ್ಳಿಗಳಲ್ಲಿ ಹೊಲಗಳಿಂದಲೂ ಅರಣ್ಯಗಳಿಂದಲೂ ಎಷ್ಟೋ ಮಟ್ಟಿಗೆ ಪುಕ್ಕಟೆ ದೊರೆಯುವವು; ಅವುಗಳನ್ನು ಒಟ್ಟುಗೂಡಿಸಿ ಪಟ್ಟಣಿಗರಿಗೆ ಮಾರುವದರಿಂದ ಬಡವರ ಉಪಜೀವಿಕೆಯು ಸಹಜವಾಗಿ ಸಾಗಬಹುದು. ಆದರೆ ಇದಕ್ಕೆ ವಿಪರೀತವಾಗಿ

ಪಟ್ಟಣಗಳಲ್ಲಿಯೂ ಪರದೇಶಗಳಲ್ಲಿಯೂ ಹುಟ್ಟಿದ, ಕಣ್ಣಿಗೆ ನುಣ್ಣಗೆ ಮತ್ತು ಅನುಕೂಲವಾಗಿ ತೋರುವ, ನಿಜವಾಗಿಯೂ ತೋರಿಕೆಗಾಗಿ ಮಾತ್ರ ಚೆನ್ನಾಗಿ ಕಾಣುವ ವಸ್ತುಗಳನ್ನು ಉಪಯೋಗಿಸುವ 'ಫೇಶನ್ನು' (ರೀತಿಯು) ಹೆಚ್ಚಾದದ್ದರಿಂದ ಹಳ್ಳಿಗಳ ಅನೇಕ ಉದ್ಯೋಗಗಳು ಮತ್ತು ಕೂಲಿಯ ಧಂದೆಗಳು ಮುಳುಗಿಹೋಗಿವೆ ಮತ್ತು ಈಗಲೂ ಮುಳುಗುತ್ತ ಇವೆ.

೬ ಇಂಥ ಅತ್ಯಂತ ಆಕರ್ಷಕವಾದ ಎಷ್ಟೋ ವಸ್ತುಗಳಂತೂ ಆರೋಗ್ಯಕ್ಕೂ ಸ್ವಚ್ಛತೆಗೂ ಹಾನಿಕರವಾಗಿರುವವಲ್ಲದೆ ಅತಿ ತುಟ್ಟಿಯೂ ಇರುವವು. ಇವುಗಳನ್ನು ಉಪಯೋಗಿಸುವದರಿಂದ ವ್ಯರ್ಥವಾದ ವೆಚ್ಚದ ಚಟವು ಮಾತ್ರ ಬೀಳುತ್ತದೆ: ಹಲ್ಲು ಉಜ್ಜಿಕೊಳ್ಳುವ ಕರಿಬೆಟ್ಟಿನ ಬದಲು ನಾನಾತರದ ದಂತ ಮಂಜನಗಳು, ಟೂಥ್‌ಪೇಸ್ಟುಗಳು, ಬ್ರಶ್ಶುಗಳು; ಹೊರಸುಗಳ ಕಟ್ಟಿಗೆಯ ಪಲ್ಲಂಗಗಳ ಬದಲು ಸ್ಪ್ರಿಂಗಿನ ಪಲ್ಲಂಗಗಳು; ಬೆಲ್ಲ ಅಥವಾ ಗಡಿಗೆಕಲ್ಲು-ಸಕ್ಕರೆಯ ಬದಲು ಗಿರಣಿಗಳಲ್ಲಿ ತಯಾರಾದ ಬಿಳಿ ಕಲ್ಲುಸಕ್ಕರೆ; ಹಂಚುಗಳ ಬದಲು ತಗಡುಗಳು; ಕಾತಿ ಮತ್ತು ನಾರಿನ ಹಗ್ಗಗಳ ಬದಲು ತಂತಿ ಮತ್ತು ತಂತಿಯ ಹಗ್ಗಗಳು; ಮಣ್ಣಿನ ಪಾತ್ರೆಗಳ ಬದಲು ಜಪಾನಿನ ಮತ್ತು ಚೀನದ ಪಾತ್ರೆಗಳು; ಹಳ್ಳಿಯ ಬಿದಿರಿನ ಬುಟ್ಟಿ ಮರ ಮುಂತಾದವುಗಳ ಬದಲು ತಗಡಿನ ಬುಟ್ಟಿಗಳು, ಮರಗಳು ಡಬ್ಬಿಗಳು ಮುಂತಾದವು; ಹಳ್ಳಿಯ ಕಮ್ಮಾರರು ಮಾಡಿದ ಸಳಿ, ಸರಪಳಿ, ಕುಡಗೋಲು, ಸವಟು, ಸುತ್ತಿಗೆ, ಕೊಡಲಿಗಳ ಬದಲು ಯಂತ್ರದಿಂದಾದ ಸಳಿ, ಸರಪಳಿ, ಸವಟು, ಸುತ್ತಿಗೆ ಮುಂತಾದ ಆಕರ್ಷಕ ವಸ್ತುಗಳು; ಹಳ್ಳಿಯ ಅಕ್ಕಸಾಲಿಗರು ಮಾಡಿದ ಆಭರಣಗಳ ಬದಲು ಪಟ್ಟಣಗಳಲ್ಲಿ ಯಂತ್ರಗಳಿಂದ ತಯಾರಿಸಲ್ಪಟ್ಟ ಅಚ್ಚಿನ ಆಭರಣಗಳು; ಹಳ್ಳಿಯ ಹೆಂಗಸರು ಮಾಡಿದ ಬೀಸಣಿಕೆ, ಆಸನ, ಜಾಜಮು ಶಾಲುಗಳ ಬದಲು ಜಪಾನಿನ ಕಾಗದದ ಬೀಸಣಿಕೆ, ಗಿರಣಿಯ ಆಸನಗಳು, ಶಾಲುಗಳು ಮೊದಲಾದವು; ಸೀಗೆಕಾಯಿ, ಅಂಟಾಳಕಾಯಿಗಳ ಬದಲು ಸುಗಂಧಮಿಶ್ರಿತವಾದ ಸಾಬೂನುಗಳು; ಗಲಗಿನ ಲೆಕ್ಕಣಿಕೆಗಳ ಬದಲು ಫೌಂಟನ್‌ಪೆನ್ನು ಮತ್ತು ಟಾಕುಗಳು; ಹಳ್ಳಿಯಲ್ಲಿ ತಯಾರಾದ ಮಸಿಯ ಬದಲು ರಸಾಯನದಿಂದ ತಯಾರಿಸಲ್ಪಟ್ಟ ಮಸಿ; ಹಳ್ಳಿಯ ಕಾಗದಗಳ ಬದಲು ಯಂತ್ರದಲ್ಲಿ ತಯಾರಾದ ಕಾಗದಗಳು; ಮನೆಯ ಶುದ್ಧ ಕಷಾಯ ಮುಂತಾದ ವನಸ್ಪತಿ ಔಷಧಗಳ ಬದಲು ತಯಾರು ಮಾಡಿಟ್ಟ ಔಷಧಗಳು; ಹಳ್ಳಿಯ ಪಾತ್ರೆಗಳ ಬದಲು ಬಾಟ್ಲಿ ಮುಂತಾದವುಗಳು.

೫ ಇವೆಲ್ಲ ವಸ್ತುಗಳು ಹಳ್ಳಿಗಳಲ್ಲಿ ಮಾಡಲ್ಪಟ್ಟ ವಸ್ತುಗಳಿಗಿಂತ ಕಡಿಮೆ ಬೆಲೆಗೆ ಸಿಕ್ಕುವಂತೆಯೂ ಇರುವದಿಲ್ಲ. ಆದರೂ ಈ ವಸ್ತುಗಳು ಮೋಹಕವಿರುವದರಿಂದ, ಶ್ರೀಮಂತರು ಮತ್ತು ಅವಿಚಾರಿಗಳು ಮಾಡಿದ ಫೇಶನ್ನಿನ ಅಂಧಾನುಕರಣ ಮಾಡುವದು ಸಭ್ಯತೆ ಎನಿಸಿದ್ದರಿಂದ, ಪ್ರಜರ ಆರ್ಥಿಕ ಸ್ಥಿತಿಯು ಚೆನ್ನಾಗಿಲ್ಲದಿದ್ದರೂ ಅವು ಮಾರಾಟವಾಗುತ್ತವೆ.

೬ ಅವಿಚಾರಿಗಳಾದ ಯಂತ್ರವಾದಿಗಳೂ ಹಳ್ಳಿಗರನ್ನು ನಿರ್ಧನಿಕ ಮಾಡಲು ಬಹಳ ಪರಿಶ್ರಮಪಟ್ಟಿದ್ದಾರೆ. ಹತ್ತಿಹಿಂಜುವ, ಭತ್ತಕುಟ್ಟುವ, ಹಿಟ್ಟುಬೀಸುವ, ಎಣ್ಣೆಗಳನ್ನು ತೆಗೆಯುವ ಕಾರಖಾನೆಗಳನ್ನು ಸ್ಥಾಪಿಸಿದ್ದಾರೆ; ಮೋಟಾರ ಬಸ್ಸುಗಳನ್ನು ಊರಿಂದೂರಿಗೆ ಹೋಗಿ ಬರುವದಕ್ಕಾಗಿ ಇಟ್ಟಿದ್ದಾರೆ.

೭ ಅಲ್ಪವಾದರೂ ಚಿಂತೆಯಿಲ್ಲ, ತತ್ಕಾಲಕ್ಕೆ ಹೆಚ್ಚು ಲಾಭವು ದೊರೆತರೆ ಸಾಕೆಂಬ ವ್ಯಾಪಾರಿಗಳು ಸ್ವಾರ್ಥದ ದೃಷ್ಟಿಯನ್ನಿಟ್ಟುಕೊಂಡಿದ್ದರಿಂದ ಹಳ್ಳಿಯ ವಸ್ತುಗಳ ಮೂಲ ಬೆಲೆಯು ಪರದೇಶೀ ಮತ್ತು ಯಂತ್ರದ ವಸ್ತುಗಳ ಬೆಲೆಗಿಂತ ತೀರ ಕಡಿಮೆಯಿದ್ದರೂ ಕೊಳ್ಳುವವನಿಗೆ ಹಳ್ಳಿಯ ವಸ್ತುಗಳು ತುಟ್ಟಿ ಬೀಳುತ್ತವೆ. ಇದರಿಂದ ಹಳ್ಳಿಗರ ಕೈಯಲ್ಲಿ ಇರಬೇಕಾಗಿದ್ದ ಪೇಟೆಗಳು ಪರದೇಶೀಯರ ಮತ್ತು ಗಿರಣಿಗಳ ಒಡೆಯರ ಕೈಯಲ್ಲಿವೆ.

೮ ಅರ್ಥಶಾಸ್ತ್ರವು ಹಳ್ಳಿಯ ದೃಷ್ಟಿಯನ್ನಿಟ್ಟುಕೊಂಡು ಬರೆಯಲ್ಪಟ್ಟ ಮೇಲೆ ಮತ್ತು ಜೀವನದಲ್ಲಿ ಹಳ್ಳಿಯ ಕಡೆಗೆ ದೃಷ್ಟಿಯು ಹೋದ ಬಳಿಕ ಮಾತ್ರ ಹಳ್ಳಿಗಳು ಹುಟ್ಟಿಸಿದ ವಸ್ತುಗಳನ್ನು ಕೊಂಡು ಉಪಯೋಗಿಸುವದರ ಕಡೆಗೆ ಜನತೆಯ ಮನಸ್ಸು ಹರಿಯುವದು. ತಮಗೆ ಅವಶ್ಯವಿದ್ದ ವಸ್ತುಗಳನ್ನು ಹಳ್ಳಿಗಳಲ್ಲಿಯೆ ಮಾಡಿಸಿಕೊಳ್ಳಬೇಕೆಂದು ಮನಸ್ಸಾಗುವದು. ಇದರಿಂದ ಹಳ್ಳಿಗಳಲ್ಲಿದ್ದ ಕಲೆ ಮತ್ತು ಉದ್ಯೋಗಗಳ ಪುನರುಜ್ಜೀವನ ಮಾಡುವದರ ಕಡೆಗೆ, ಹಳ್ಳಿಗರಿಗೆ ಶಿಕ್ಷಣವನ್ನೀಯುವದರ ಕಡೆಗೆ, ಹಳ್ಳಿಯ ಕಾಡುಗಳನ್ನು ಮತ್ತು ಹೊಲಗಳನ್ನು ಹರಗಿ ತಮ್ಮ ಉಪಯೋಗಕ್ಕೆ ತಂದುಕೊಳ್ಳುವದರ ಕಡೆಗೆ, ಅವುಗಳನ್ನು ಬೆಳೆಯುಳ್ಳವುಗಳನ್ನಾಗಿ ಮಾಡುವದರ ಕಡೆಗೆ, ಜ್ಞಾನದ ಅಭಾವದಿಂದ ವ್ಯರ್ಥವಾಗಿ ಹಾಳಾಗಿ ಹೋಗುವ ಸಂಪತ್ತು ಮತ್ತು ನೈಸರ್ಗಿಕ ವಸ್ತುಗಳನ್ನು ಹುಡುಕಿ ಉಪಯೋಗಿಸಿಕೊಳ್ಳುವದರ ಕಡೆಗೆ ಜನತೆಯ ಮನಸ್ಸು ಪ್ರವಹಿಸುವದು.

೯ ಇವತ್ತು ಸಿರಿಯು ಹಳ್ಳಿಗಳಿಂದ ಪಟ್ಟಣಗಳಿಗೂ, ಪಟ್ಟಣಗಳಿಂದ ಪರದೇಶಗಳಿಗೂ ಹರಿದುಹೋಗುತ್ತಿದೆ. ಇದನ್ನು ಆಮೂಲವಾಗಿ ತಡೆಯುವದು ಮತ್ತು ಪ್ರವಾಹವು ತಿರುಗಿ ಹಳ್ಳಿಗಳತ್ತ ಹರಿಯುವಂತೆ ಮಾಡುವದು ಅತ್ಯಂತ ಆವಶ್ಯವಿದೆ. ಹಳ್ಳಿಗಳ ಸಿರಿಯು ಹಳ್ಳಿಗಳಲ್ಲಿಯೆ ಉಳಿಯುವಂತೆಯೂ ಹಳ್ಳಿಗಳು ಸ್ವಾವಲಂಬಿಗಳಾಗುವಂತೆಯೂ ಇಷ್ಟೇ ಅಲ್ಲ, ಪಟ್ಟಣ ನಿವಾಸಿಗಳು ತಮಗೆ ಅವಶ್ಯವಿದ್ದ ವಸ್ತುಗಳನ್ನು ಹಳ್ಳಿಗಳಲ್ಲಿಯೆ ಮಾಡಿಸಿಕೊಳ್ಳುವಂತೆಯೂ ಹಳ್ಳಿಗಳೆ ಪಟ್ಟಣಿಗರಿಗೆ ಸರ್ವವಸ್ತುಗಳನ್ನು ಪೂರೈಸಿಕೊಡುವಂತೆಯೂ ಮಾಡುವದು ಅತ್ಯಂತ ಅವಶ್ಯವಿರುವದು.

## ೮ ಧನೇಚ್ಛೆ

೧ ಸಾಮಾನ್ಯವಾಗಿ ಬಹಳ ಜನರು ತಮ್ಮ ಆರ್ಥಿಕ ಸ್ಥಿತಿಯಲ್ಲಿ ಮತ್ತು ಸುಖಾನುಕೂಲತೆಗಳಲ್ಲಿ ಸ್ವಲ್ಪ ಸುಧಾರಣೆಯನ್ನು ಮತ್ತು ಉನ್ನತಿಯನ್ನು ಮಾಡಬಯಸುವರು ಎಂದು ಅನ್ನಬಹುದಾದರೂ ಮನುಷ್ಯನ ಸಿರಿಸುಖದ ಇಚ್ಛೆಗೆ ಮೇರೆಯೆ ಇಲ್ಲ. ಎಲ್ಲರೂ ಲಕ್ಷಪತಿಗಳು, ಜಮೀನುದಾರರು ಇಲ್ಲವೆ ರಾಜರು ಆಗಲು, ಬಂಗಲೆ ಅರಮನೆಗಳಲ್ಲಿ ವಾಸಿಸಲು ತಲ್ಲಣಿಸುವರು ಎಂದು ಎಲ್ಲರ ಬಗ್ಗೆಯೂ ಹೇಳಿದರೆ ಆ ವಿಧಾನವು ಸಾಮಾನ್ಯ ಮನುಷ್ಯರಿಗೆ ಅನ್ವಯಿಸದಂತಹದು ಇದೆ. ಅಲ್ಲದೆ ಹೀಗೆ ಅನ್ನುವದೆಂದರೆ ಸಾಮಾನ್ಯ ಜನರ ವಿಷಯವಾಗಿ ಕೀಳು ಅಭಿಪ್ರಾಯವನ್ನು ವ್ಯಕ್ತಪಡಿಸಿದಂತೆಯೂ ಅವರ ಎದುರಿನಲ್ಲಿ ಕೀಳು ತರಗತಿಯ ಆದರ್ಶವನ್ನು ಇಟ್ಟಂತೆಯೂ ಆಗುವದು.

೨ ಬಹಳ ಜನರು ಧನವನ್ನು ತಿರಸ್ಕರಿಸುವದೂ ಇಲ್ಲ ಅದರ ಆತ್ಯಾಶೆಯುಳ್ಳವರೂ ಇರುವದಿಲ್ಲ. ಆದರೆ ಅವರು ವರ್ಷದ ಕೊನೆಯಲ್ಲಿ ತಮ್ಮ ಬಳಿಯಲ್ಲಿ ಸ್ವಲ್ಪ ಹಣವು ಕೂಡಿಬಿದ್ದುದನ್ನು ನೋಡಲಿಚ್ಛಿಸುವರು, ಇದು ನಿಜವು. ಆ ಹಣವು ಕೂಡ ಬೇನೆ ಬೇಸರಿಕೆ, ಮದುವೆ ಮುಂಜಿ, ಹಬ್ಬ ಹುಣ್ಣಿಮೆ, ತೀರ್ಥಯಾತ್ರೆ ದಾನಧರ್ಮಕ್ಕಾಗಿ ಇಲ್ಲವೆ ಮುಪ್ಪಿನಲ್ಲಿ ವೆಚ್ಚ ಮಾಡುವದಕ್ಕೆ ಸಾಕಾಗುವಷ್ಟು ಮಾತ್ರ ಇರುತ್ತದೆ. ಧಾರ್ಮಿಕ ಸಂಸ್ಕಾರವಿದ್ದ ಜನರಲ್ಲಿ ಧನ ಮತ್ತು ಸುಖ ಇವೆರಡರ ಅಪಾರವಾದ ತೃಷ್ಣೆಗೆ ಎಲ್ಲೆಯು ಇದ್ದೇ ಇರುವದು.

೩ ಸಿಕಂದರ ಅಥವಾ ನೆಪೋಲಿಯನ್ ಇಲ್ಲವೆ ಭರ್ತೃಹರಿ ಅಥವಾ ಗೋಪಿಚಂದರು ಆಗಲು ಎಲ್ಲ ರಾಜರಲ್ಲೂ ಹೇಗೆ ಮಹಾತ್ವಾಕಾಂಕ್ಷೆಯೂ

ಶಕ್ತಿಯೂ ಇರುವದಿಲ್ಲವೊ ಹಾಗೆಯೆ ತೀರ ಶ್ರೀಮಂತರು ಇಲ್ಲವೆ ತೀರ ಬಡ ವರು ಆಗುವ ಮಹಾತ್ವಾಕಾಂಕ್ಷೆಯೂ ಧೈರ್ಯ ಸಾಹಸಗಳೂ ಬಹು ಜನರಲ್ಲಿ ಇರುವದಿಲ್ಲ.

೪ ಆದರೆ ಪ್ರತಿಯೊಂದು ಜನಾಂಗದಲ್ಲಿ ತುಸು ಜನರಿಗೆ ಮಾತ್ರ ಅಸಾಧಾರಣವಾದ ಮಹತ್ವಾಕಾಂಕ್ಷೆಯೂ ಸಾಹಸದ ಕಾರ್ಯಗಳನ್ನು ಮಾಡುವ ಅಸಾಧಾರಣವಾದ ಶಕ್ತಿಯೂ ಇರುವದು. ಕೆಲವರು ಬಡತನದ ಗುರಿಯನ್ನು ತಮ್ಮೆದುರಿನಲ್ಲಿ ಇಟ್ಟುಕೊಂಡರೆ ಕೆಲವರು ಶ್ರೀಮಂತಿಕೆಯ ಗುರಿಯನ್ನು ತಮ್ಮೆದುರಿನಲ್ಲಿ ಇಟ್ಟುಕೊಳ್ಳುವರು.

೫ ಜನತೆಯ ಸುಖಾನುಕೂಲತೆಗಳಿಗೂ ಧನೇಚ್ಛೆಗೂ ಹಾನಿಯಾಗದಂತೆ, ಸಾಹಸ ಶೌರ್ಯದ ಕಾರ್ಯಗಳನ್ನು ಮಾಡಿತೋರಿಸಬೇಕೆನ್ನುವವರಿಗೆ ಒಳ್ಳೆ ಸಂಧಿಗಳು ದೊರೆಯುವಂತೆ ಸಮಾಜದ ರಚನೆಯನ್ನು ಮಾಡಬೇಕು. ಮತ್ತು ಸಮಾಜದ ವ್ಯವಸ್ಥೆಯನ್ನೂ ಇಡಬೇಕು; ಇಷ್ಟೇ ಅಲ್ಲ, ಇದರಿಂದ ಹಲವರ ಮಹತ್ವಾಕಾಂಕ್ಷೆಗೆ ಉತ್ತೇಜನವು ದೊರೆತರೂ ಕೊನೆಯಲ್ಲಿ ಸಮಾಜಕ್ಕೆ ಲಾಭವೆ ಆಗುವಂತೆ ಇರಬೇಕು.

೬ ಸಮಾಜದ ರಚನೆಯಲ್ಲಿ ಪೌರುಷಪ್ರದರ್ಶನಕ್ಕೆ ಒಳ್ಳೆಯ ಸಂಧಿಗಳೂ ಪ್ರಸಂಗಗಳೂ ದೊರೆಯದಿದ್ದರೆ ಜನರ ಮಹತ್ವಾಕಾಂಕ್ಷೆಯು ಅವರನ್ನು ಅಡ್ಡದಾರಿಗೆ ಸೆಳೆದೊಯ್ಯುವದು ಮತ್ತು ಅದರಿಂದ ಸಮಾಜಕ್ಕೆ ಹಾನಿಯಾಗುವದು.

೭ ಉದ್ಯೋಗ ವ್ಯವಸಾಯಗಳಲ್ಲಿಯೂ ಸಮಾಜ ಸೇವೆಯ ಎಷ್ಟೋ ಕಾರ್ಯಗಳಲ್ಲಿಯೂ ನಾನಾ ತರದ ಸಾಹಸವನ್ನು ತೋರಿಸಬೇಕಾಗುವದು. ನಾನಾ ಬಗೆಯ ಕಷ್ಟನಷ್ಟಗಳನ್ನು ಸಹಿಸಬೇಕಾಗುವದು. ಇವುಗಳಲ್ಲಿ ಯಶಸ್ಸು ದೊರೆತೇತೀರುವದೆಂದು ಹೇಳಲಾಗುವದಿಲ್ಲ. ಸಾರ್ವಜನಿಕ ಸಂಸ್ಥೆಗಳಿಗಿಂತಲೂ ವ್ಯಕ್ತಿಗಳು ಮತ್ತು ಸಾರ್ವಜನಿಕವಲ್ಲದ ಸಂಸ್ಥೆಗಳು ಇವುಗಳಲ್ಲಿ ಪ್ರಯೋಗಗಳನ್ನು ಮಾಡಿದರೆ ಹೆಚ್ಚು ಅನುಕೂಲವಾಗುವದಲ್ಲದೆ ಯಶಸ್ಸಾದರೂ ದೊರಕಬಹುದು. ಸಮಾಜದ ರಚನೆಯು ಇವರಿಗೂ ಇವುಗಳಿಗೂ ಅನುಕೂಲವಾಗಿ ಇರಬೇಕು.

## ೫ ವ್ಯಾಪಾರ

೧ ಅವಶ್ಯವಾದ ದೊಡ್ಡ ಉದ್ಯೋಗಗಳನ್ನು ಬೆಳೆಯಿಸುವದು ಮತ್ತು ಅವಶ್ಯವಿದ್ದ ವಸ್ತುಗಳನ್ನು ಜನತೆಗೆ ತಲ್ಪಿಸುವದು ವ್ಯಾಪಾರದ ಯೋಗ್ಯ

ಕಾರ್ಯಕ್ಷೇತ್ರವಾಗಿದೆ; ಇದರಲ್ಲಿ ಅನಾಯಾಸವಾಗಿ ಎಷ್ಟು ಉಳಿತಾಯುವಾಗು ವದೊ ಅದೇ ಲಾಭವೆನಿಸುವದು.

೨ ಉದ್ಯೋಗ ವ್ಯವಸಾಯಕ್ಕೆ ತಗಲುವ ವೆಚ್ಚವನ್ನು ಪದಾರ್ಥದ ಮೇಲೆ ಹಂಚಿ ಹಾಕಿದ ಮೇಲೆ, ಹಾನಿಯಾಗುವದನ್ನು ತಪ್ಪಿಸಿಕೊಳ್ಳುವದಕ್ಕಾಗಿ ಹಾಕಿದ ಹೆಚ್ಚಿನ ಬೆಲೆಯೆ ಅನಾಯಾಸವಾಗಿ ಉಳಿತಾಯುವಾದದ್ದು ಎನಿಸು ವದು. ಈ ಉಳಿತಾಯುವು ಪ್ರತ್ಯೇಕದಲ್ಲಿ ಅತ್ಯಲ್ಪವಾಗಿ ತೋರಿದರೂ ಉದ್ಯೋಗದ ಪ್ರಮಾಣದಿಂದ ಒಟ್ಟು ಕೂಡಿಸಿ ನೋಡಿದರೆ ದೊಡ್ಡ ಧನ ಸಂಗ್ರಹ ಕಾಣುವದು.

೩ ಈ ರೀತಿ ಹೆಚ್ಚಾಗಿ ಉಳಿದ ಧನವನ್ನು ಆಯಾ ಉದ್ಯೋಗಗಳಲ್ಲಿ ಕೆಲಸಮಾಡುವ ಕೂಲಿಕಾರರ ಕಲ್ಯಾಣಕ್ಕಾಗಿಯೂ ಇಲ್ಲವೆ ಇತರ ಅನೇಕ ಉಪಯೋಗೀ ಉದ್ಯೋಗಗಳನ್ನು ಹೆಚ್ಚಿಸುವದಕ್ಕಾಗಿಯೂ ಇಲ್ಲವೆ ಸಾರ್ವ ಜನಿಕ ಹಿತವನ್ನು ಮಾಡುವಂಥ ಕಾರ್ಯಗಳಿಗಾಗಿಯೂ ವಿನಿಯೋಗಿಸುವದು ಕಲ್ಯಾಣಕರವಾದುದು.

೪ ಇಂಥ ಧನದ ಒಡೆಯನು ತಾನು ಈ ಧನದ ಸಂರಕ್ಷಕನೆಂದು ತಿಳಿದು ಕೊಂಡು ಈ ಹಣವನ್ನು ಸಾರ್ವಜನಿಕ ಕಾರ್ಯಗಳಿಗಾಗಿ ವಿನಿಯೋಗಿಸುವದು ತನ್ನ ಧರ್ಮವೆಂದು ತಿಳಿದುಕೊಂಡರೆ ಅವನು ಬಂಡವಲುಗಾರನಿದ್ದರೂ ಪ್ರಜರ ಕಲ್ಯಾಣವನ್ನು ಮಾಡುವನು ಮತ್ತು ಪ್ರಜರ ಹೊಟ್ಟೆಕಿಚ್ಚಿಗೆ ಬಲಿಯಾಗುವದಿಲ್ಲ.

೫ ಆದರೆ ಅವನು ಈ ಧನದಿಂದ ತನ್ನ ಸ್ವಾರ್ಥಸಾಧನೆಯ ಮಾರ್ಗವನ್ನೆ ಅವಲಂಬಿಸಿದರೆ ಮತ್ತು ಈ ಧನವನ್ನು ಇಮ್ಮಡಿಸುವ ದೃಷ್ಟಿಯನ್ನೆ ಇಟ್ಟುಕೊಂಡರೆ ಜನತೆಯ ತಿರಸ್ಕಾರದ ಕೂರಂಬುಗಳಿಗೆ ಪಾತ್ರನಾಗುವನು. ಅಲ್ಲದೆ ಶ್ರೀಮಂತ ಬಡವರಲ್ಲಿ ಭೇದಭಾವನೆಯನ್ನು ಹುಟ್ಟಿಸಿ ಕಲಹಗಳನ್ನು ಹುಟ್ಟಿಸುವಂಥವನಾಗುವನು.

೬ ಶ್ರೀಮಂತರು ತಮ್ಮ ಆಶ್ರಯದಾತರಿಗೆ ಅವರ ಕೌಟುಂಬಿಕ ಶುಭ ಕಾರ್ಯಗಳಲ್ಲಿ ತಮ್ಮ ಬಂಗಲೆ, ಕುದುರೆ, ಗಾಡಿ, ಪಾತ್ರೆ, ಜಮುಖಾನೆ, ಗುಡಾರ, ಆಭರಣ ಮುಂತಾದವುಗಳನ್ನು ಕೊಟ್ಟು ಅವರ ಶುಭಕಾರ್ಯಗಳು ಸುಸೂತ್ರ ವಾಗಿ ಸಾಗುವಂತೆ ಮಾಡಿ ಅವರ ಮನಸ್ಸನ್ನು ಪ್ರಫುಲ್ಲಿತವಾಗಿರುವಂತೆ ಮಾಡುವದು ತಮ್ಮ ಕುಲಧರ್ಮವೆಂದು ತಿಳಿಯಬೇಕಲ್ಲದೆ ಅದರಂತೆಯೆ ತಮ್ಮ

ಆಚರಣೆಯನ್ನಿಡಬೇಕು ಮತ್ತು ಇವರೊಡನೆ ಬಡವರ ಜೀವನವು ಉಪವಾಸ-ವನವಾಸ, ಬೇನೆ-ಬೇಸರಿಕೆಗಳಿಲ್ಲದೆ ಸುಖದಿಂದ ಸಾಗಬೇಕು; ಅಂದರೆ ಮಾತ್ರ ಶ್ರೀಮಂತರು ಬಂಗಾರದ ತಟ್ಟೆಯಲ್ಲಿ ಉಂಡರೂ ಅತ್ತ ಕಡೆ ಬಡವರು ಕಣ್ಣು ಹೊರಳಿಸಿ ನೋಡುವದಿಲ್ಲ. ಇಷ್ಟೇ ಅಲ್ಲ, ಜನತೆಯ ಬಹುಭಾಗವು ಶ್ರೀಮಂತರನ್ನು ಸರಿಪಡಿಸಬೇಕೆಂಬ ಗೋಜಿಗೆ ಹೋಗಲು ಇಚ್ಛಿಸುವದಿಲ್ಲ.

೭ ಈ ರೀತಿ ಶ್ರೀಮಂತರ ನಡತೆಯಿದ್ದರೆ ಮಾತ್ರ ಅವರು ಈ ಧನದ ಸಂರಕ್ಷಕರು ತಾವೆಂದು ತಿಳಿದುಕೊಂಡು ಈ ಧನದ ಸದ್ವಿನಿಯೋಗ ಮಾಡುತ್ತಿರುವರೆಂದು ಎನ್ನಬಹುದು. ಹೀಗಿದ್ದರೂ ಅವರಲ್ಲಿ ಧನದಾಶೆಯು ಸರ್ವಥಾ ಇರುವದಿಲ್ಲವೆನ್ನಲಾಗುವದಿಲ್ಲ. ಆದರೂ ಈ ಧನವು ಪ್ರಜರಿಗೆ ಕೇಡು ಬಗೆಯದೆ ಅವಶ್ಯಕತೆಯುಂಟಾದಾಗ ಉಪಯೋಗಕ್ಕೆ ಬರಬೇಕೆಂದು ಕೂಡಿಟ್ಟ ಧನಸಂಗ್ರಹವೆನಿಸುವದು.

೮ ಇಂಥ ಪರಿಸ್ಥಿತಿ ಇದ್ದ ಕಡೆಯಲ್ಲಿ ಸಾಮ್ಯವಾದಿಗಳ ಪ್ರಚಾರಕ್ಕೆ ಮನಸೋತು ಜನರು ಶ್ರೀಮಂತರನ್ನು ನಾಶ ಮಾಡಲುದ್ಯುಕ್ತರಾಗುವದಿಲ್ಲ.

೯ ಶ್ರೀಮಂತರು ಈ ರೀತಿ ಇದ್ದುಕೊಂಡು ಸರಳವಾದ, ಆಡಂಬರ ರಹಿತವಾದ ಮತ್ತು ಸಂಯಮೀ ಜೀವನವನ್ನು ಕಳೆಯಲಾರಂಭಿಸಿದರೆ ಅವರು ಶ್ರೀಮಂತರಿದ್ದರೂ ಪ್ರಜರಿಗೆ ಪೂಜ್ಯರಾಗುವರು.

## ೭ ಸಾವುಕಾರಿಕೆ

೧ ಕಡಿಮೆ ಬಡ್ಡಿಯಿಂದ ಹಣ ತೆಗೆದುಕೊಂಡು ಹೆಚ್ಚು ಬಡ್ಡಿ ಬರುವಂತೆ ಆ ಹಣವನ್ನು ಯಾವದಾವರೂ ಉದ್ಯೋಗದಲ್ಲಿ ಹಾಕುವದಕ್ಕೆ ಸಾವುಕಾರಿಕೆ ಎನ್ನುವರು. ಸಮಾಜದ ಹಿತಕ್ಕಾಗಿ ಅತ್ಯಂತ ಅವಶ್ಯವಿದ್ದ ಸಾವುಕಾರಿಕೆಯು ಇದಲ್ಲ.

೨ ಇವತ್ತು ಜಗತ್ತಿನಲ್ಲಿ ನಡೆದಿರುವ ಸಾವುಕಾರಿಕೆಯೆಂದರೆ, ಪರದೇಶೀ ವ್ಯಾಪಾರಿಗಳ ದಲಾಲಿಯು, ಅಥವಾ ಒಕ್ಕಲಿಗರ ಮತ್ತು ಇತರ ಉದ್ಯೋಗಗಳನ್ನು ಮಾಡುವವರ ಭೂಮಿ, ಸ್ಥಾವರಜಂಗಮ ಆಸ್ತಿ, ಸ್ವಲ್ಪ ಮುಂದುವರಿದರೆ ಪರರಾಜ್ಯಗಳನ್ನು ಮೆಲ್ಲಮೆಲ್ಲನೆ ಅಪಹರಿಸುವ ಹಂಚಿಕೆ ಇರುವದು. ಯುರೋಪು, ಅಮೇರಿಕೆಯಂಥ ದೇಶಗಳಲ್ಲಿ ಹೆಚ್ಚು ಬಡ್ಡಿ ಸಿಗುವದೆಂಬ ಆಶೆಯಿಂದ ತನ್ನ ದೇಶದ ಬಡವರನ್ನು ದುರ್ಲಕ್ಷಿಸಿ ಪರದೇಶಗಳಲ್ಲಿ

ಹಣವನ್ನು ಬಡ್ಡಿಗಾಗಿ ಇಡುವ ಬುದ್ಧಿಯನ್ನು ಈ ಸಾವುಕಾರಿಕೆಯು ಹುಟ್ಟಿಸಿದೆ. ಇದರಿಂದ ಶ್ರೀಮಂತ ದೇಶಗಳಲ್ಲಿಯೂ ಕ್ಲೇಶಗಳು ಕೊನೆತನಕ ವಾಸವಾಗಿರುವಂತೆ ಆಗಿದೆ.

೩ ವ್ಯವಹಾರ ಮಾಡುವಾಗ ಸುಳ್ಳಾಡಿದರೆ ದೋಷವಿಲ್ಲವೆಂದು ಭಾವಿಸುವದು ಭಯಂಕರವಾದ ಅಧರ್ಮವಿರುವದು.

೪ ಅಶಿಕ್ಷಿತ, ಸರಳ ಮತ್ತು ನಂಬಿಗಸ್ತ ಜನರನ್ನು ಅಥವಾ ವಿಲಾಸಿಗಳಾದ ಶ್ರೀಮಂತರನ್ನು ಇಲ್ಲವೆ ರಾಜರನ್ನು ದುಂದುಗಾರರನ್ನಾಗಿ ಮಾಡಿ ಅವರಿಗೆ ವ್ಯಸನಗಳನ್ನು ಹಚ್ಚಿ ಋಣಿಗಳನ್ನಾಗಿ ಮಾಡುವದು, ವ್ಯಾಪಾರದಲ್ಲಿ ಮೋಸ ಮಾಡುವದು, ಸುಳ್ಳು ಲೆಕ್ಕ ಮಾಡುವದು ಮತ್ತು ಸುಳ್ಳು ಲೇಖೀ ಪ್ರಮಾಣಗಳನ್ನು ಹುಟ್ಟಿಸುವದು ಸಾವುಕಾರಿಕೆಯಲ್ಲ, ಆದರೆ ಅದು ಧಗಧಗಿಸುವಂಥ ಪಾಪವು ಮತ್ತು ಹಿಂಸೆಯು.

೫ ಇಂಥ ಅಧರ್ಮದಿಂದ ಯುಕ್ತವಾದ ಸಾವುಕಾರಿಕೆಯಿಂದ ಧನವಂತೂ ದ್ವಿಗುಣಿತವಾಗಿಲ್ಲ, ಆದರೆ ಅನರ್ಥವು ಮಾತ್ರ ಹೆಚ್ಚಾಗಿದೆ.

೬ ಜನರು ತಮ್ಮ ಧನವನ್ನು ಉದ್ಯೋಗಗಳಿಗೆ ನೆರವಾಗುವ ರೀತಿಯಲ್ಲಿಯೆ ಇಡಬೇಕು. ಸ್ವದೇಶದಲ್ಲಿಯೆ ಧನವನ್ನು ಉದ್ಯೋಗಗಳಲ್ಲಿ ತೊಡಗಿಸಬೇಕು. ಇದರಿಂದ ಲಾಭವು ಹೆಚ್ಚಾಗಿ ಹಣವು ದ್ವಿಗುಣಿತವಾದರೆ ಅದರ ಉಪಯೋಗವು ಸ್ವದೇಶದ ಸಾರ್ವಜನಿಕ ಕಾರ್ಯಗಳಿಗಾಗಿ ಆಗಬೇಕು. ಹಣವನ್ನು ಬಡ್ಡಿಗೆ ಹಚ್ಚಿ ಬಡ್ಡಿಯಿಂದಲೆ ಸಾರ್ವಜನಿಕ ಕಾರ್ಯಗಳು ಜರಗಬೇಕು. ಎಂಬ ವಿಚಾರವು ಯಾವಾಗಲೂ ಸರಿಯಾದುದಲ್ಲ. ಏಕೆಂದರೆ ಈ ಹಣದ ಉಪಯೋಗವು ಹೆಚ್ಚೆಚ್ಚಾಗಿ ಸಾರ್ವಜನಿಕ ಕಾರ್ಯಗಳಿಗಾಗದೆ ಹೆಚ್ಚು ಹೆಚ್ಚು ಬಡ್ಡಿಯನ್ನು ದೊರಕಿಸುವ ವ್ಯಕ್ತಿಯ ಬೆಳವಣಿಗೆಗೆ ಕಾರಣವಾಗುತ್ತದೆ.

೭ ಸಾಲ ಮಾಡಿ ಕೌಟುಂಬಿಕ ಕಾರ್ಯಗಳನ್ನು ಸಾಗಿಸಕೂಡದೆಂದು ಕಟ್ಟಪ್ಪಣೆ ಇರಬೇಕು. ಆ ಕಾರ್ಯಗಳು ಅತ್ಯಂತ ಕಡಿಮೆ ವೆಚ್ಚದಲ್ಲಿ ಸಾಂಗವಾಗುವಂತೆ ಸಮಾಜದ ರೂಢಿಗಳಲ್ಲಿ ಬದಲಾವಣೆಯಾಗಬೇಕು. ಹೀಗಾದಾಗ್ಯೂ ಬೇನೆಬೇಸರಿಕೆ, ಅನುವು, ಆಪತ್ತು ಅಥವಾ ಮದುವೆ ಮುಂಜಿಗಳಿಗಾಗಿ ಅಕಸ್ಮಾತ್ ಕೊಂಚ ಹಣವು ಬೇಕಾದರೆ ಬಡ್ಡಿಯಿಲ್ಲದೆ ಗೆಳೆತನ ನಂಬಿಗೆಯಿಂದ ಸಮಾಜದಿಂದಲೆ ಅದು ಸಿಕ್ಕಬೇಕು. ಅಂಗಡಿಕಾರನು ಮನೆತನಕ್ಕೆ ಬೇಕಾಗುವ ಪದಾರ್ಥಗಳನ್ನು ಕೊಟ್ಟರೆ ಮತ್ತು ಮೇಲ್ಕಾಣಿಸಿದಂಥ

ಕೌಟುಂಬಿಕ ಶುಭ ಕಾರ್ಯಗಳ ಪ್ರಸಂಗಗಳಲ್ಲಿ ಪದಾರ್ಥಗಳನ್ನು ಕೊಟ್ಟು ಸಹಾಯ ಮಾಡಿದರೆ ಅವುಗಳ ಮೇಲೆಯೂ ಬಡ್ಡಿಯನ್ನು ಹೇರಿ ವಸೂಲ ಮಾಡುವುದು ಯೋಗ್ಯವೆನಿಸುವದಿಲ್ಲ.

೮ ಸದ್ಯದ ಪರಿಸ್ಥಿತಿಯಲ್ಲಂತೂ ಇಂಥ ಪ್ರಸಂಗಗಳಲ್ಲಿ ಕೊಟ್ಟ ಸಾಲಕ್ಕೆ ಹೆಚ್ಚು ಬಡ್ಡಿಯು ಸಿಕ್ಕಬಲ್ಲದು. ಆದ್ದರಿಂದ ಜನರನ್ನು ವ್ಯಸನಗಳಲ್ಲಿ ನೂಕಿ, ಸಲ್ಲದ ಖರ್ಚುಗಳಲ್ಲಿ ಮುಳುಗಿಸಿ ಅವರಿಂದ ಹೆಚ್ಚು ಬಡ್ಡಿಯ ಆಶೆಪಡಲು ಸಾವುಕಾರರಿಗೆ ಆಸ್ಪದವಾಗಿದೆ.

೯ ಇನ್ನೊಂದು ಕಡೆಯಿಂದ, ಮುದ್ದತಿನ ಮತ್ತು ದಿವಾಳಿಯ ಕಾಯಿದೆಗಳು ಪ್ರಜರ ನೈತಿಕ ಭಾವನೆಯನ್ನು ಹೆಚ್ಚು ಕೆಡಿಸಲು ನೆರವಾಗಿವೆ. ಈ ಕಾಯಿದೆಗಳು ದಿವಾಳಿ ತೆಗೆಯುವ ಬುದ್ಧಿಯನ್ನೂ ಸಟ್ಟಾ ವ್ಯಾಪಾರಪದ್ಧತಿಯನ್ನೂ ಹಿಂತಿರುಗಿ ಕೊಡುವ ಬುದ್ಧಿ ಇಲ್ಲದೆ ಸಾಲಮಾಡುವ ವೃತ್ತಿಯನ್ನೂ ಬೆಳೆಸುತ್ತವೆ.

೧೦ ಈ ಪ್ರಕಾರ ರೈತರ ಮತ್ತು ಸಾವುಕಾರರ ಸಂಬಂಧವು ಇಲಿ ಬೆಕ್ಕುಗಳಂತೆ ಆಗಿದೆ; ಅಥವಾ ಒಬ್ಬರು ಮತ್ತೊಬ್ಬರನ್ನು ಮೋಸಗೊಳಿಸಲು ಹೆಣಗುತ್ತಿರುವ ಶತ್ರುಗಳಂತೆ ಅವರು ಆಗಿರುವರು. ಒಬ್ಬರು ಇನ್ನೊಬ್ಬರ ಹಿತವನ್ನು ಸಾಧಿಸಬೇಕು, ಸಾವುಕಾರನು ರೈತರ ಉದ್ಯೋಗಗಳು ಊರ್ಜಿತವಾಗಬೇಕೆಂದು ಸಹಾಯ ಮಾಡಲು ಬಯಸಬೇಕು ಮತ್ತು ತಾವು ತೆಗೆದುಕೊಂಡ ಸಾಲವನ್ನು ಸರಿಯಾದ ಕಾಲದಲ್ಲಿ ಮುಟ್ಟಿಸುವದು ತಮ್ಮ ಕುಲಧರ್ಮವೆಂದು ಜನರು ತಿಳಿಯುತ್ತಿರಬೇಕು; ಈ ತರದ ಸಂಬಂಧವು ಪೀಳಿಗೆಯಿಂದ ಪೀಳಿಗೆಗೆ ನಡೆದುಬರಬೇಕು. ಆದರೆ ಈಗ ಇಂಥ ಸಂಬಂಧವು ಉಳಿದಿಲ್ಲ.

೧೧ ಸಾವುಕಾರ ಮತ್ತು ಸಾಲಗಾರನ ಸ್ಥಿತಿಯು ಯಾವ ರೀತಿ ಇರುವದೊ ಅದೇ ರೀತಿ ಯಜಮಾನನ ಮತ್ತು ಆಳುಮಗನ ಸ್ಥಿತಿಯಾಗಿದೆ.

## ೭ ಜೀವನವೇತನ

೧ ಮನುಷ್ಯನು ಯಾವದೆ ಪ್ರಕಾರದ ಪರಿಶ್ರಮ ಮಾಡುತಿರಲಿ ಅವನು ಇಡೀ ದಿವಸ ತನ್ನ ಸಾಧನಗಳ ಮತ್ತು ಶಿಕ್ಷಣದ ಯೋಗ್ಯ ಮತ್ತು ಪ್ರಾಮಾಣಿಕ ಉಪಯೋಗ ಮಾಡುತಿದ್ದರೆ ಅವನಿಗೆ ಸಾಕಷ್ಟು ಕೂಲಿ ಅಥವಾ ಜೀವನವೇತನವು ದೊರೆಯಲಿಕ್ಕೆಬೇಕು. ಅವನ ಮತ್ತು ಅವನ ಮೇಲೆ

ಅವಲಂಬಿಸಿದ ದುರ್ಬಲ ಆಶ್ರಿತರ ಸಮಾಧಾನಕಾರಕ ಪಾಲನಪೋಷಣವಾಗುವಷ್ಟು ದೊರೆತರೆ ಅದೇ ಜೀವನವೇತನವೆನಿಸುವದು.

೨ ಇಡೀ ದಿವಸ ಅಂದರೆ ಎಂಟು ತಾಸು ಎಂದು ತಿಳಿಯತಕ್ಕದ್ದು. ಹಳ್ಳಿಗಳಲ್ಲಿಯ ಈಗಿನ (೧೯೪೦) ಸಾಧನಗಳು, ಇರುವ ಪದ್ಧತಿ, ಜೀವನ ಮರ್ಯಾದೆ, ಜೀವನದ ಮಟ್ಟನ್ನು ಮೇಲಕ್ಕೇರಿಸುವ ಆವಶ್ಯಕತೆ, ಅದೇ ರೀತಿ ಪದಾರ್ಥಗಳ ಬೆಲೆ ಮುಂತಾದವುಗಳನ್ನು ವಿಚಾರಿಸಲಾಗಿ ಎಂಟು ತಾಸಿನದೊಂದು ದಿನ ಮತ್ತು ತಾಸಿಗೆ ಒಂದಾಣೆ ಕೂಲಿ ಹೀಗೆ ನಿರ್ಧರಿಸುವದು ಯೋಗ್ಯವೆನಿಸುವದು.

೩ ಆ ಮಟ್ಟನ್ನು ನಾವು ಒಮ್ಮೆಲೆ ಮುಟ್ಟುವ ಸಾಮರ್ಥ್ಯವು ನಮ್ಮಲ್ಲಿಲ್ಲದಿದ್ದರೂ ಆ ದಿಕ್ಕಿನಿಂದ ನಾವು ಸಾಗತಕ್ಕದ್ದಿದೆ ಎಂಬುದನ್ನು ಲಕ್ಷಿಸಿ ನಾವು ಮುಂದೆ ಹೆಜ್ಜೆ ಇಕ್ಕುತ್ತ ಹೋಗಬೇಕು.

೪ ಯಾವದೇ ಬಗೆಯ ಪರಿಶ್ರಮ ಮಾಡುವ ಪ್ರತಿಯೊಬ್ಬನ ಕೂಲಿಯು ಸಮಾನವಾದಾಗಲೆ ನಾವು ಆದರ್ಶ ಸ್ಥಿತಿಯನ್ನೂ ವರ್ಣಧರ್ಮದ ಪರಿಪೂರ್ಣಾವಸ್ಥೆಯನ್ನೂ ಮುಟ್ಟಿದೆವು ಅನ್ನಬಹುದು. ಆದರೆ ನಿಕಟ ಭವಿಷ್ಯದಲ್ಲಿ ಆ ಸ್ಥಿತಿಗೆ ನಾವು ಮುಟ್ಟುವ ಲಕ್ಷಣಗಳಿಲ್ಲ. ಆದುದರಿಂದ ಆ ಆದರ್ಶವನ್ನು ಕಣ್ಣುಮುಂದಿಟ್ಟುಕೊಂಡು ಮುಂದೆ ಸಾಗಲಿಕ್ಕೆ ಬರುವಷ್ಟು ನಾವು ಹೋಗುವ ಧೋರಣೆಯನ್ನು ಸ್ವೀಕರಿಸಲಿಕ್ಕೆಬೇಕು.

## ೮ ಕೂಲಿಕಾರರ ಪ್ರಶ್ನೆಗಳು

೧ ಜೀವನದ ವಿಷಯಕ್ಕೆ ಇರುವ ನಮ್ಮ ತಪ್ಪು ವಿಚಾರಗಳು ಕೂಲಿಕಾರರ ಪ್ರಶ್ನೆಯನ್ನು ಹೆಚ್ಚು ಜಟಿಲ ಮಾಡಿವೆ.

೨ ತಪ್ಪು ವಿಚಾರಗಳು ಅಥವಾ ತಪ್ಪು ದೃಷ್ಟಿಬಿಂದುಗಳು ಕೆಳಗಿನಂತೆ ಇವೆ:—

(ಕ) ಮನುಷ್ಯನು ಬಿಡುವನ್ನೆ ಬಯಸುವನು ಮತ್ತು ಕೆಲಸವು ಒಂದು ಹೊರೆಯೆಂದು ತಿಳಿಯುವನು;

(ಖ) ಮನುಷ್ಯನ ಆಧ್ಯಾತ್ಮಿಕ ಉನ್ನತಿಗಾಗಿ ಬಿಡುವು ಅತ್ಯಗತ್ಯವಿದೆ ಮತ್ತು ಶಾರೀರಿಕ ಶ್ರಮವು ಆಧ್ಯಾತ್ಮಿಕ ಉನ್ನತಿಗೆ ವಿರೋಧಿಯಾಗಿದೆ;

(ಗ) ಅತ್ಯಂತ ಕಡಿಮೆ ಕೆಲಸಮಾಡಿ ಅತ್ಯಂತ ಹೆಚ್ಚು ಸುಖವನ್ನು ಪಡೆಯುವದು ಶ್ರಮವಿಭಾಗದ ಧ್ಯೇಯವು.

(ಘ) ಕೂಲಿಕಾರನ ಸ್ವಾರ್ಥಕ್ಕಿಂತ ಒಡೆಯನ ಸ್ವಾರ್ಥವು ತೀರ ಭಿನ್ನವಾಗಿದೆ.

೩ ಮೇಲ್ಕಾಣಿಸಿದ ಕಾರಣಗಳಿಂದ ಕೂಲಿಕಾರರ ಎದುರಿನಲ್ಲಿ ಕೀಳು ತರದ ಗುರಿಯನ್ನಿಡುವ ಪ್ರಯತ್ನವು ಆಗುತ್ತಿದೆ :

(ಕ) ಯಂತ್ರಗಳಲ್ಲಿ ಚೆನ್ನಾಗಿ ಸುಧಾರಣೆಮಾಡಿ ಮೂರು ನಾಲ್ಕು ಗಂಟೆ ಮಾತ್ರ ಶ್ರಮಮಾಡಿ ಜೀವನಕ್ಕೆ ಅವಶ್ಯವಿದ್ದ ಎಲ್ಲ ವಸ್ತುಗಳನ್ನು ಹುಟ್ಟಿಸಿಬಿಡುವದು.

(ಖ) ಶ್ರೀಮಂತನನ್ನು ಅಥವಾ ಬಂಡವಲುಗಾರರನ್ನು ನಾಶಿಸುವದು.

೪ ಮೇಲಿನ ಆದರ್ಶಗಳು ಅಪರೂಪವಾಗಿ ಕೈಗೂಡಬಹುದು, ಆದರೆ ಅವುಗಳಿಂದ ನಿಜವಾಗಿಯೂ ಮಾನವಜಾತಿಯು ಸುಖಿಯಾಗುವದೆಂಬ ಭರವಸೆ ಇಲ್ಲ.

೫ ನಿಜವಾಗಿಯೂ ನೋಡಿದರೆ ಕೂಲಿಕಾರರ ಇಲ್ಲವೆ ಕೋಟ್ಯಾನು ಕೋಟಿ ಜನರ ಸುಖದ ಬಗ್ಗೆ ಕೆಳಗಿನ ದೃಷ್ಟಿಯಿಂದ ವಿಚಾರ ಮಾಡಬೇಕು.

(ಕ) ಮನುಷ್ಯನಲ್ಲಿ ಶ್ರಮಮಾಡುವ ಶಕ್ತಿಯು ಸ್ವಾಭಾವಿಕವಾಗಿಯೆ ಇರುತ್ತದೆ. ಆದರೆ ಅದು ಕುಗ್ಗಿಹೋಗುವಷ್ಟು, ಸ್ವತಃ ದುಡಿದು ತನ್ನ ನಿರ್ವಾಹಮಾಡಿಕೊಂಡು ಹೋಗಲು ಅಯೋಗ್ಯನಾಗುವಷ್ಟು ಮನುಷ್ಯನು ಯಂತ್ರಾದಿ ಬಾಹ್ಯ ಸಾಧನಗಳಿಗೆ ಅಧೀನನಾಗಿರುವಂತೆ ಮಾಡಕೂಡದು.

(ಖ) ಶಾರೀರಿಕ ಶ್ರಮವನ್ನು ಮಾಡುವ ಶಕ್ತಿಯು ಬೆಳೆಯಬೇಕು. ಕೂಲಿಕಾರನ ಶಕ್ತಿಯನ್ನು ಹೆಚ್ಚುಮಾಡುವ ದೃಷ್ಟಿಯನ್ನು ಇಟ್ಟುಕೊಂಡೆ ಅವನು ಮಾಡುವ ಕೆಲಸದ ಸಮಯ, ಅವನ ಮನೆಮಾರು ಮುಂತಾದ ಅನುಕೂಲತೆಗಳ ಬಗ್ಗೆ ವಿಚಾರ ಮಾಡಬೇಕು.

(ಗ) ಅತ್ಯಂತ ಸೂಕ್ಷ್ಮ ಶ್ರಮವಿಭಾಗವನ್ನು ಮಾಡಿ ಕೂಲಿಕಾರರನ್ನು ಜಡಯಂತ್ರದಂತೆ ಮಾಡಿ ಅವನಿಂದ ೩-೪ಗಂಟೆ ನೀರಸವಾದ ಯಾಂತ್ರಿಕ ಕಾರ್ಯವನ್ನು ಮಾಡಿಸಿಕೊಂಡು, ಬಳಿಕ ಆನಂದ ಉತ್ಸಾಹಗಳ ಕಡೆಗೆ ಮನಸ್ಸನ್ನು ಹಾಕಲು ಬಿಡುವನ್ನು ಕೊಟ್ಟುಬಿಟ್ಟರೆ ಇದರಿಂದ ಮಾನವ

ಜಾತಿಯ ಕಲ್ಯಾಣವಾಗುವದಿಲ್ಲ. ಅವನ ಕರ್ಮದಲ್ಲಿಯೆ ಆನಂದವು ದೊರೆಯುವಂತೆ, ಅಲ್ಲಿಯೆ ವಿನೋದಪ್ರವೃತ್ತಿಗೆ ಇಂಬು ದೊರೆಯುವಂತೆ, ಅಲ್ಲಿಯೆ ಆಧ್ಯಾತ್ಮಿಕ ಉನ್ನತಿಯನ್ನು ಮಾಡಿಕೊಳ್ಳಲು ಬರುವಂತೆ ಉದ್ಯೋಗವ್ಯವಸಾಯಗಳನ್ನು ರಚಿಸುವ ಮಾರ್ಗಗಳನ್ನು ಹುಡುಕಬೇಕು.

(ಘ) ಮನುಷ್ಯನಿಗೆ ಉದ್ಯೋಗದ ಕಡೆ ಪ್ರವೃತ್ತಿ ಇದ್ದ ಮೇಲೆ ಅವನಿಗೆ ಬೇರೆ ಪ್ರವೃತ್ತಿಗಳೆ ಇರುವದು ಅವಶ್ಯವಿಲ್ಲವೆಂದು ಅಥವಾ ಬಿಡುವೇ ಬೇಡವೆಂದು ಇದರ ಅರ್ಥವಾಗುವದಿಲ್ಲ. ಪ್ರತಿಯೊಬ್ಬನಿಗೂ ಯಾವದೊಂದು ನಿರ್ದೋಷ ಮನರಂಜನೆಯ ಪ್ರವೃತ್ತಿಯು ಇರುವದು ಒಳಿತು, ಆದರೆ ಅದು ಗೌಣವಾಗಿ ಇರಬೇಕು; ಆ ಪ್ರವೃತ್ತಿಗಾಗಿ ಅವನಿಗೆ ಬಿಡುವೂ ದೊರೆಯಬೇಕು, ಆದರೆ ಅದೆಲ್ಲವೂ ಗೌಣವಾಗಿಯೆ ಇರಬೇಕು, ಪ್ರಧಾನವಾಗಿರಕೂಡದು. ಬಹಳ ಜನರು ತಮ್ಮ ಬಿಡುವಿನ ವೇಳೆಯನ್ನು ಯೋಗ್ಯವಾಗಿ ಉಪಯೋಗಿಸುವಂತೆ ಸಾಕಷ್ಟು ಸಂಸ್ಕಾರವು ಇನ್ನೂ ಜನತೆಗೆ ಸಿಕ್ಕಿಲ್ಲ. ಹೆಚ್ಚು ಜನರು ತಮ್ಮ ಬಿಡುವಿನ ಸಮಯವನ್ನು ನಿದ್ರೆ, ವ್ಯಸನ ಮತ್ತು ದೋಷಪೂರಿತವಾದ ಭೋಗಗಳಲ್ಲಿ ಕಳೆಯುವ ಭಯವಿರುವದೆಂದು ಹೇಳಬಹುದು.

(ಚ) ಮನುಷ್ಯನು ತನ್ನ ಉಪಜೀವನಕ್ಕಾಗಿ ಕಠಿಣ ಪರಿಶ್ರಮವನ್ನು ಮಾಡಬೇಕಾಗುವದು. ಇದು ಸೃಷ್ಟಿಯು ಮನುಷ್ಯನ ಮೇಲೆ ಮಾಡುವ ಕೋಪವಲ್ಲ ಆದರೆ ಅನುಗ್ರಹವು. ನಮ್ಮ ಶ್ರಮಮಾಡುವ ಶಕ್ತಿಯು ಹೆಚ್ಚಾಗಬೇಕೆಂಬ ಧ್ಯೇಯವೆ ಇರಬೇಕು, ಶ್ರಮಮಾಡಬಾರದೆಂಬ ಧ್ಯೇಯವು ಇರಕೂಡದು.

(ಛ) ಯಜಮಾನನು ಕೂಲಿಕಾರರ ವ್ಯವಸ್ಥಾಪಕನಾಗಿ ಅವರವರ ತೂಕದ ಪ್ರಕಾರ ಕೆಲಸವನ್ನು ಕೊಡಬೇಕು ಮತ್ತು ಅದಕ್ಕೆ ಸಾಕಷ್ಟು ಕೂಲಿಯನ್ನೂ ಅನುಕೂಲತೆಗಳನ್ನೂ ಮಾಡಿಕೊಡಬೇಕು; ಕೂಲಿಕಾರನು ಯಜಮಾನನ ಕೆಲಸವು ತನ್ನ ಕೆಲಸವೆಂದೆ ತಿಳಿದು ಅದನ್ನು ಮನಗೊಟ್ಟು ಮಾಡಬೇಕು, ಅಂದರೆ ಇಬ್ಬರ ಹಿತವೂ ಆಗುವದು.

(ಜ) ಇದಕ್ಕಾಗಿ ಸ್ವಂತ ಭಾಂಡವಲು ಇರಬೇಕೊ ಇರಬಾರದೊ ಎಂಬ ಪ್ರಶ್ನೆಯು ಬಹಳ ಮಹತ್ವದ್ದಲ್ಲ. ಆದರೆ ಉದ್ಯೋಗ ಮತ್ತು ವಾಣಿಜ್ಯದ ಧ್ಯೇಯದಲ್ಲಿ ಪರಿವರ್ತನೆ ಆಗುವದು ಅವಶ್ಯವಿದೆ.

(ಝ) ವ್ಯಾಪಾರವನ್ನು ಬೆಳೆಯಿಸುವದಕ್ಕಾಗಿ ಹೊಸ ಹೊಸ ಅವಶ್ಯಕತೆಗಳನ್ನು ಹೆಚ್ಚಿಸುವದು ಉದ್ಯೋಗದ ಧ್ಯೇಯವಲ್ಲ. ರೂಢವಾದ ಮತ್ತು ಹೊಸದಾಗಿ ಉತ್ಪನ್ನವಾಗುವ ಆವಶ್ಯಕತೆಗಳ ಪೂರೈಕೆಯನ್ನು ಆದಷ್ಟು ಚೆನ್ನಾಗಿ ಮಾಡುವದೆ ಉದ್ಯೋಗದ ಧ್ಯೇಯವಾಗಿದೆ. ವ್ಯಾಪಾರದ ಪ್ರಯೋಜನವೂ ಇಷ್ಟಕ್ಕಾಗಿಯೆ. ಇದರಂತೆ ನಡೆಯುವಾಗ ಎಷ್ಟೋ ಹೊಸ ವಸ್ತುಗಳು ಬೇಕಾಗುವದೇನೊ ನಿಜವು. ಆದರೆ ಈ ಧ್ಯೇಯವನ್ನು ನೆನಪಿನಲ್ಲಿಟ್ಟುಕೊಂಡರೆ ಹಿಂದುಳಿದವರೆಂದು ಎನಿಸಿಕೊಳ್ಳುವ ಜನರ ಆವಶ್ಯಕತೆಗಳನ್ನು ಹೆಚ್ಚಿಸುವ ಗೋಜಿಗೆ ವಾಣಿಜ್ಯವು ಹೋಗಲಾರದು ಮತ್ತು ಅವರನ್ನು ಹೀರಬೇಕೆನ್ನುವ ನೀತಿಗೆ ಆಸ್ಪದವನ್ನು ಕೊಡಲಾರದು. ಹೀಗಾದರೆ ಕೂಲಿಕಾರರೂ ಯಜಮಾನರೂ ಅನ್ಯೋನ್ಯಾಶ್ರಯದಿಂದ ಇರುವರು.

(ರ) ಇಂಥ ಧ್ಯೇಯವು ಇರದಿದ್ದರೆ ಶ್ರೀಮಂತ ವ್ಯಕ್ತಿಯ ಬದಲು ಜಡಯಂತ್ರವು ಅಥವಾ ತಂತ್ರವು ಎಲ್ಲರ ಯಜಮಾನವಾಗುವದು, ಅಥವಾ ಒಬ್ಬನು ಯಜಮಾನನು ಇನ್ನೊಬ್ಬನು ಕೂಲಿಕಾರನು ಆಗುವನು. ಇದರಿಂದ ಮನುಷ್ಯನ ಸುಖವು ಹೆಚ್ಚದು.

## ೯ ಸ್ವಾವಲಂಬನವೂ ಶ್ರಮವಿಭಾಗವೂ

೧ ಸ್ವಾವಲಂಬನವು ಶ್ರಮವಿಭಾಗಕ್ಕೆ ವಿರೋಧಿಯಲ್ಲ. ಪರದೇಶಗಳ ಸಂಗಡ ಔದ್ಯೋಗಿಕ ಸಂಬಂಧವನ್ನು ಇಟ್ಟುಕೊಳ್ಳಲು ಸ್ವಾವಲಂಬನವು ಅಡ್ಡಿ ತರುವದಿಲ್ಲ. ಸಮಾಜದಲ್ಲಿರುವ ಮನುಷ್ಯನು ಸಂಪೂರ್ಣ ಸ್ವಾವಲಂಬಿಯಾಗುವದು, ತನ್ನ ಎಲ್ಲ ಆವಶ್ಯಕತೆಗಳನ್ನು ತಾನೇ ಪೂರೈಸಿಕೊಳ್ಳುವದು ಸಾಧ್ಯವಿಲ್ಲ. ಒಂದುವೇಳೆ ಸಂಪೂರ್ಣ ಸ್ವಾವಲಂಬಿಯಾಗಿರಲು ಪ್ರಯತ್ನಿಸಿದರೆ ಅದು ವ್ಯರ್ಥ ಹೋರಾಟ ಮಾತ್ರವಾಗುವದು, ಅಹಂಕಾರವಾಗುವದು. ಇಡೀ ಜಗತ್ತಿನೊಡನೆ ಪ್ರೇಮದಿಂದ ಇರಬೇಕೆನ್ನುವವನು ಅಹಿಂಸೆಯಿಂದ ಒಂದುಗೂಡಬೇಕೆನ್ನುವವನು ಸ್ವಯಂಪರ್ಯಾಪ್ತ (Self-sufficient) ಆಗುವ ಮೋಹಕ್ಕೆ ಬೀಳಬಾರದು.

೨ ತನಗೆ ಪೂರೈಸಿಕೊಳ್ಳಲು ಬರುವಂಥ ಎಷ್ಟೋ ಆವಶ್ಯಕತೆಗಳು ಉಂಟು ಮತ್ತು ಅವಕ್ಕಾಗಿ ಸೃಷ್ಟಿಯ ಅನುಕೂಲತೆಗಳೂ ಇದ್ದಲ್ಲಿ ಇಂಥ ಆವಶ್ಯಕತೆಗಳನ್ನು ಪೂರೈಸಿಕೊಳ್ಳಲು ಮನುಷ್ಯನು ಸ್ವಾವಲಂಬಿಯಾದರೆ ಅದು ದೋಷವೆನಿಸುವದಿಲ್ಲ, ಯೋಗ್ಯವೆನಿಸುವದು. ಇಂಥ ಆವಶ್ಯಕತೆಗಳ

ಪೂರೈಕೆಗಾಗಿ ಅನ್ಯರ ಪರಿಶ್ರಮವನ್ನು ಇಚ್ಛಿಸಿ ಅದನ್ನು ಉಪಯೋಗಿಸಿಕೊಳ್ಳ ಬೇಕೆಂದೂ ಅವುಗಳ ಸಲುವಾಗಿ ಅವರೊಡನೆ ಆರ್ಥಿಕ ಸಂಬಂಧವನ್ನು ಇಡ ಬೇಕೆಂದೂ ವಿಧಿಯಿಲ್ಲ. ಉದಾ : ತನ್ನ ಬಟ್ಟೆಗಳನ್ನು ಅಗಸರಿಂದಲೆ ಸ್ವಚ್ಛ ಮಾಡಿಸಿಕೊಳ್ಳುವದು, ಭಂಗಿಯವನಿಂದಲೆ ಪಾಯಖಾನೆಗಳನ್ನು ಸ್ವಚ್ಛ ಮಾಡಿಸಿಕೊಳ್ಳುವದು, ನಾಪಿಕನಿಂದಲೆ ಕ್ಷೌರ ಮಾಡಿಸಿಕೊಳ್ಳುವದು ಮತ್ತು ಖಾನಾವಳಿಗೆ ಹೋಗಿಯೆ ಅಲ್ಲಿ ಆಹಾರವನ್ನು ತೆಗೆದುಕೊಳ್ಳುವದು ಇವುಗಳನ್ನು ಮಾಡಿಯೆತೀರಬೇಕೆಂಬ ನಿರ್ಬಂಧವಿಲ್ಲ. ಈ ವಿಷಯಗಳಲ್ಲಿ ನಾವು ಸ್ವಾವಲಂಬಿಯಾಗಬಹುದು.

೩ ಇದೇ ನಿಯಮವು ದೇಶದ ಮತ್ತು ಜನರ ವ್ಯವಹಾರಕ್ಕೂ ಅನ್ವಯಿ ಸುವದು. ಹಿಂದುಸ್ತಾನದಲ್ಲಿ ಸಾಕಷ್ಟು ಧಾನ್ಯಗಳೂ ಹತ್ತಿಯೂ ಬೆಳೆಯು ತ್ತದೆ. ಆದ್ದರಿಂದ ಅನ್ನವಸ್ತ್ರಗಳ ವಿಷಯದಲ್ಲಿ ಸ್ವಾವಲಂಬಿಯಾಗಿ ಸ್ವಯಂ ಪರ್ಯಾಪ್ತವಾಗುವದರಲ್ಲಿ ಅದಕ್ಕೆ ಅಭಿಮಾನವಿರಬೇಕು. ಆದರೆ ಹೀಗೆ ಮಾಡಿ-ದಾಕ್ಷಣಕ್ಕೆ ಅದು ಅನ್ಯ ದೇಶಗಳೊಡನೆ ಔದ್ಯೋಗಿಕ ಸಂಬಂಧವನ್ನು ಇಡಲು ಇಚ್ಛಿಸುವದಿಲ್ಲವೆಂದು ಹೇಳಲಿಕ್ಕಾಗುವದಿಲ್ಲ.

೪ ಇದೇ ತೆರನಾಗಿ ಹಿಂದುಸ್ತಾನದಲ್ಲಿ ವಿಕಾಸಹೊಂದಲು ನೈಸರ್ಗಿಕ ಅನುಕೂಲತೆಗಳುಳ್ಳ ಎಲ್ಲ ಉದ್ಯೋಗಗಳ ಬೆಳವಣಿಗೆಗಾಗಿ ಉಪಾಯಗಳನ್ನು ಕೈಕೊಂಡರೆ ಅದರಲ್ಲಿ ದೋಷವಾವದೂ ಇಲ್ಲ. ಇಂತಹ ಆರ್ಥಿಕ ಯೋಜನೆ ಗಳನ್ನು ಮಾಡದೆ ಪ್ರಜರ ಸುಖವನ್ನು ಬಯಸುವದು ನಿರರ್ಥಕವಾದದ್ದು.

೫ ಹಿಂದುಸ್ತಾನದ ಧಾನ್ಯವನ್ನು ಪರದೇಶಕ್ಕೆ ಕಳಿಸಿ ಅಲ್ಲಿಂದ ರೊಟ್ಟಿ ಗಳನ್ನು ತರಿಸಿಕೊಂಡು ತಿನ್ನುವದು, ಎಳ್ಳು ಮತ್ತು ನೆಲಗಡ್ಲೆಗಳನ್ನು ಪರ ದೇಶಗಳಿಗೆ ಕಳಿಸಿ ಅಲ್ಲಿಂದ ಎಣ್ಣೆಯನ್ನು ತರಿಸಿಕೊಳ್ಳುವದು; ಹತ್ತಿಯನ್ನು ಕಳಿಸಿ ಬಟ್ಟೆಯನ್ನು ತರಿಸಿಕೊಳ್ಳುವದು ಅಯೋಗ್ಯವು. ಇದು ದೇಶದೇಶಾಂತರ ಶ್ರಮವಿಭಾಗವು, ದೇಶದೇಶಾಂತರ ಸಹಕಾರ ಪದ್ಧತಿಯು ಎಂದು ಹೇಳಿ ಲ್ಯಾಂಕೇಶಾಯರದಂಥ ಕಲ್ಲಿದ್ದಲಿಯ ಕಣಿಯುಳ್ಳ, ಆರ್ದ್ರ ಹವೆಯುಳ್ಳ ಪ್ರದೇಶಗಳಲ್ಲಿ ಮಾತ್ರ ಬಟ್ಟೆಯನ್ನು ತಯಾರಿಸಲು ನೈಸರ್ಗಿಕ ಅನುಕೂಲತೆ ಗಳು ಇವೆ ಎಂದು ಹೇಳಿ ಅಲ್ಲಿಂದಲೆ ಬಟ್ಟೆಗಳನ್ನು ತಯಾರು ಮಾಡಿಸಿ ತರಿಸಿ ಕೊಂಡರೆ ಅದು ಶ್ರಮವಿಭಾಗತತ್ವದ ಮತ್ತು ಸಹಕಾರತತ್ವದ ದುರುಪ ಯೋಗವು.

## ೧೦ ಸ್ವದೇಶಿ

೧ ಕಚ್ಚಾ ಮಾಲು ಹುಟ್ಟುವ ಕಡೆಯಲ್ಲಿ ಅದಕ್ಕೆ ಸಂಬಂಧಪಟ್ಟ ಉದ್ಯೋಗಗಳನ್ನು ನಡೆಯಿಸಬೇಕೆನ್ನುವದೆ ಪ್ರತಿಯೊಂದು ದೇಶದ ಆರ್ಥಿಕ ನೀತಿಯಾಗಿರಬೇಕು. ಇದಕ್ಕೆ ಆರ್ಥಿಕ ದೃಷ್ಟಿಯಿಂದಲೂ ರಾಜಕೀಯ ದೃಷ್ಟಿಯಿಂದಲೂ 'ಸ್ವದೇಶಿ ಚಳವಳಿ' ಎನ್ನುವರು.

೨ ಕಚ್ಚಾ ಮಾಲು ಪರದೇಶಕ್ಕೆ ಹೋಗಬೇಕು ಮತ್ತು ಅದು ಅಲ್ಲಿಂದ ತಯಾರ ಪದಾರ್ಥಗಳ ರೂಪದಲ್ಲಿ ಸ್ವದೇಶಕ್ಕೆ ಮರಳಿ ಬರಬೇಕು; ಈ ಪದ್ಧತಿಯು ಆರ್ಥಿಕ ದೃಷ್ಟಿಯಿಂದ ಎಷ್ಟೇ ಲಾಭಕರವೆನಿಸಿದರೂ ಇದರಲ್ಲಿ ಲೆಕ್ಕದಲ್ಲಿ ತಪ್ಪಾಗಿರುವ ಸಂಭವವೂ ಎಲ್ಲಿಯಾದರೂ ಅನ್ಯಾಯ, ಅಧರ್ಮ, ಅತ್ಯಾಚಾರಗಳು ಜರಗಿರುವ ಸಂಭವವೂ ಇರುವದು. ಇಲ್ಲದಿದ್ದರೆ ಆರ್ಥಿಕ ಲಾಭವು ಅಸಂಭವವು.

೩ 'ಫ್ರೀ ಟ್ರೇಡ್' ಅರ್ಥಾತ್ ಸುಂಕರಹಿತ ಮುಕ್ತ ವ್ಯಾಪಾರವೆಂದು ಯಾವದಕ್ಕೆ ಇಂಗ್ಲಂಡವು ಎನ್ನುವದೊ ಅದು ನಿಜವಾಗಿಯೂ ಹಾಗಿರುವದಿಲ್ಲ. ಏಕೆಂದರೆ ಅದು ತನ್ನ ದೇಶದ ಉದ್ಯೋಗಗಳು ಚಿರಂಜೀವಿಯಾಗಿರುವದಕ್ಕಾಗಿ ಮತ್ತು ಪರದೇಶಗಳ ಉದ್ಯೋಗಗಳು ನಷ್ಟವಾಗುವದಕ್ಕಾಗಿ ಸುಂಕದ ಉಪಯೋಗವನ್ನು ಮಾಡದೆ ಸೈನ್ಯದ ಬಲವನ್ನೂ ರಾಜಕೀಯ ಅಧಿಕಾರವನ್ನೂ ಕುಟಿಲ ನೀತಿಯನ್ನೂ ಉಪಯೋಗಿಸುವದು. ಇದು ಸ್ವದೇಶಿ ನೀತಿಯ ಅನ್ಯಾಯದ ಮತ್ತು ಅಧಮ ಸ್ವರೂಪವು.

೪ ಆರ್ಥಿಕ ದೃಷ್ಟಿಯಿಂದ ಸ್ವದೇಶಿ ಮತ್ತು ಬಹಿಷ್ಕಾರ ಇವೆರಡರಲ್ಲಿ ಭೇದವೇನೂ ಇಲ್ಲ. ಕೋಟ್ಯಾನುಕೋಟಿ ಜನರ ನಿರ್ವಾಹವು ಯಾವ ವಸ್ತುಗಳಿಂದ ಆಗುತ್ತಿರುವದೊ ಅಂಥ ವಸ್ತುಗಳನ್ನು ಪರದೇಶಗಳಿಂದ ತರಿಸದಿರುವದು ಬಹಿಷ್ಕಾರವೆನಿಸುವದು. ಈ ಬಹಿಷ್ಕಾರವು ಒಂದು ವಿಶಿಷ್ಟ ದೇಶದೊಡನೆ ಇರದೆ ಸರ್ವದೇಶಗಳೊಡನೆ ನಡೆದರೆ ಅದು ಸ್ವದೇಶಿಯೆ ಎನಿಸುವದು.

೫ ಒಂದು ದೇಶದ ವಿರುದ್ಧವಾಗಿ ಸಾರಲ್ಪಟ್ಟ ಬಹಿಷ್ಕಾರವು ರಾಜಕೀಯ ಬಹಿಷ್ಕಾರವೆನಿಸುವದು, ಆದ್ದರಿಂದ ಈ ಪ್ರಕರಣದಲ್ಲಿ ಅದನ್ನು ಕುರಿತು ವಿಚಾರಿಸುವದು ಅವಶ್ಯವಿರುವದಿಲ್ಲ.

## ೧೧ ಯಾಂತ್ರಿಕ ಸಾಧನಗಳು

೧ ಭಾರತೀಯ ಅರ್ಥಶಾಸ್ತ್ರದ ದೃಷ್ಟಿಯಿಂದ ಯಾಂತ್ರಿಕ ಸಾಧನಗಳು

ಮತ್ತು ಅವುಗಳಲ್ಲಿ ಮಾಡತಕ್ಕ ಸುಧಾರಣೆಗಳೆಂಬ ಎರಡು ಭಾಗಗಳನ್ನು ಮಾಡಬಹುದು: (೧) ಪರಿಶ್ರಮ ಮಾಡುವ ಮನುಷ್ಯನ ಮತ್ತು ಪಶುವಿನ ಸ್ನಾಯುಗಳಿಗೆ ಕಡಿಮೆ ಶ್ರಮವು ಬೀಳಬೇಕು ಮತ್ತು ಸ್ವಲ್ಪ ಸಮಯ ಉಳಿಯಬೇಕು ಎಂಬ ದೃಷ್ಟಿಯನ್ನೇ ಮುಖ್ಯವಾಗಿ ಇಟ್ಟುಕೊಂಡು ಯೋಜಿಸಲ್ಪಟ್ಟ ಯಂತ್ರಗಳು ಮತ್ತು ಅವುಗಳ ಸುಧಾರಣೆಗಳು. ಉದಾಹರಣಾರ್ಥ : ಗಡಗಡೆ, ರಾಟಿ, ಬೈಸಿಕಲ್ಲು, ಹೊಲಿಗೆ ಯಂತ್ರ, ಬೀಸುಕಲ್ಲು, ಚಕ್ಕಡಿ-ಗಾಡಿ ಮುಂತಾದವುಗಳು; ಇವುಗಳಲ್ಲಿ ಸವೆದು ಹೋಗುವದನ್ನು ಕಡಿಮೆ ಮಾಡಲು ಆದ ಸುಧಾರಣೆಗಳು; ಉದಾಹರಣಾರ್ಥ: ಸವೆಗುಂಡು, (Bali bearing) ರಾಜಮಾರ್ಗ, ರೈಲುಮಾರ್ಗ, ಇತ್ಯಾದಿ; ಮತ್ತು (೨) ಶ್ರಮಜೀವಿಗಳ ಮತ್ತು ಶ್ರಮ ಮಾಡುವ ಪಶುಗಳ ಸ್ಥಾನಗಳನ್ನು ಆಕ್ರಮಿಸುವುದಕ್ಕಾಗಿ ಇಲ್ಲವೆ ಕೂಲಿಕಾರರ ಮತ್ತು ಪಶುಗಳ ಸಂಖ್ಯೆಯನ್ನು ಕಡಿಮೆ ಮಾಡುವುದಕ್ಕಾಗಿ, ಕೂಲಿಕಾರನ ಬುದ್ಧಿಚಾತುರ್ಯ ಮತ್ತು ಬಲದ ಉಪಯೋಗ ಮಾಡಿಕೊಳ್ಳುವುದನ್ನು ಬಿಟ್ಟು. ಅವನನ್ನು ಯಂತ್ರದಂತೆ ದುಡಿಸಿಕೊಳ್ಳುವುದಕ್ಕಾಗಿ ಮಾಡಿದ ಯಂತ್ರಗಳು ; ಉದಾಹರಣಾರ್ಥ : ಭತ್ತ ಮತ್ತು ಹಿಟ್ಟಿನ ಗಿರಣಿ, ಎಣ್ಣೆ ತೆಗೆಯುವ ಸಕ್ಕರೆ ಮಾಡುವ ಕಾರಖಾನೆಗಳು; ನೂಲಿನ ಮತ್ತು ಬಟ್ಟೆಯ ಗಿರಣಿಗಳು; ಮೋಟಾರು, ರೇಲುಗಾಡಿ ಮೊದಲಾದ ವಸ್ತುವಾಹನಗಳು, ಟ್ರಕ್ಟರು, ವಿದ್ಯುತ್ತಿನಿಂದ ನಡೆಯುವ ನೀರಿನ ನಳಗಳು, ಸೂಕ್ಷ್ಮ ಶ್ರಮ ವಿಭಾಗದಿಂದ ಹುಟ್ಟಿದ ಯಂತ್ರ ಮುಂತಾದವುಗಳು.

೨ ಮೊದಲಿನ ತರದ ಯಾಂತ್ರಿಕ ಸಾಧನಗಳು ಮತ್ತು ಸುಧಾರಣೆಗಳು ಅವಶ್ಯ ಬೇಕಾಗುವವು. ಇವುಗಳಿಂದ ಕೂಲಿಕಾರರ ಹಾಗೂ ಪಶುಗಳ ಸಂಖ್ಯೆಯು ಕಡಿಮೆಯಾಗಬಹುದು ಆದರೆ ಅದು ಅತ್ಯಂತ ಅಲ್ಪ.

೩ ಎರಡನೆ ತರದ ಯಂತ್ರಗಳನ್ನು ಮತ್ತು ಅವುಗಳ ಸುಧಾರಣೆಗಳ ಉಪಯೋಗವನ್ನು ಹೆಚ್ಚು ವಿವೇಕದಿಂದಲೂ ಎಚ್ಚರದಿಂದಲೂ ಮಾಡಬೇಕಾಗುವದು. ಶಸ್ತ್ರಾಸ್ತ್ರ ಮತ್ತು ಮದ್ದು-ಗುಂಡುಗಳನ್ನು ಮಾಡಲು ಮತ್ತು ಉಪಯೋಗಿಸಲು ಹೇಗೆ ಸರಕಾರದ ಅಪ್ಪಣೆ ಪಡೆದುಕೊಳ್ಳಬೇಕಾಗುವದೊ ಹೇಗೆ ಸರಕಾರದವರ ಅಂಕುಶವು ಇವುಗಳ ಮೇಲಿರುವದೊ ಹಾಗೆಯೆ ಎರಡನೆ ತರದ ಯಂತ್ರಗಳನ್ನು ಯಾರು ಎಷ್ಟರಮಟ್ಟಿಗೆ ಉಪಯೋಗಿಸಿಕೊಳ್ಳಬೇಕೆನ್ನುವ ಬಗ್ಗೆ ಪ್ರಜಾಸತ್ತಾತ್ಮಕ ಸರಕಾರದ ಕಟ್ಟಳೆ ಇರಬೇಕು.

೪ ಈ ಕೆಳಗಿನ ಪರಿಸ್ಥಿತಿಯಲ್ಲಿ ಎರಡನೆ ತರದ ಯಂತ್ರಗಳನ್ನು ಉಪಯೋಗಿಸುವದು ದೋಷವೆನಿಸುವದಿಲ್ಲ :

(ಕ) ಕೆಲಸವು ಹೆಚ್ಚು ಇದ್ದು ಮಾಡುವವರು ಕಡಿಮೆ ಇರುವಲ್ಲಿ ಮತ್ತು ಸಿಕ್ಕದಿರುವಲ್ಲಿ ಇಲ್ಲವೆ ಸಿಕ್ಕರೂ ಅವರನ್ನು ಕೆಲಸಕ್ಕೆ ಹಚ್ಚಲು ಬರುವಂತೆ ಇರದಲ್ಲಿ, ಉದಾ: ಉಗಿಹಡಗಗಳ ಮೇಲೆ;

(ಖ) ಅಕಸ್ಮಾತ್ ಸಂಕಟಗಳು ಉದ್ಭವಿಸಿದಲ್ಲಿ, ಕೆಲಸವನ್ನು ಅತ್ಯಂತ ತ್ವರೆಯಿಂದ ಮಾಡುವದು ಅವಶ್ಯವಿದ್ದಲ್ಲಿ ಮತ್ತು ಯಾಂತ್ರಿಕ ಸಾಧನೆಗಳ ಬದಲು ಅಸಂಖ್ಯ ಮನುಷ್ಯರನ್ನು ನಿಯಮಿಸುವದರಿಂದ ಅವ್ಯವಸ್ಥೆಯೂ, ಸಡಿಲೂ ತೊಂದರೆಗಳೂ ಹೆಚ್ಚಾಗುವಂತಹ ಪರಿಸ್ಥಿತಿಯಲ್ಲಿ; ಉದಾ: ಬೆಂಕೆ ನೊಂದಿಸುವಾಗ, ಬರಗಾಲ ಮುಂತಾದ ದೈವೀಕೋಪಗಳಿಂದ ಜನರನ್ನು ರಕ್ಷಿಸುವಾಗ, ಪೀಡಿತರಿಗೆ ಧಾನ್ಯಾದಿಗಳನ್ನು ತಲ್ಪಿಸುವಾಗ;

(ಗ) ಸಹಯೋಗಿ ( ಜೋಡು ) ದಂಧೆಗಳಿಗೆ ಎಡೆಕೊಡುವಂಥ ಅಥವಾ ಸಹಯೋಗಿ ಉದ್ಯೋಗಗಳನ್ನು ಊರ್ಜಿತ ಸ್ಥಿತಿಗೆ ಒಯ್ಯುವಂಥ ಮತ್ತು ಸಹಯೋಗಿ ಉದ್ಯೋಗಗಳನ್ನು ನಾಶ ಮಾಡದಂಥ ಯಂತ್ರಗಳು ಇರಬೇಕು; ಉದಾ: ಹೆಚ್ಚು ಕೆಲಸ ಕೊಡುವಂಥ ರಾಟಿಗಳು, ಹಗ್ಗ ಹೊಸೆಯುವ ಚಕ್ರಗಳು, ಮುಂತಾದವು;

(ಘ) ಮೊದಲಿನ ತರದ ಯಂತ್ರಗಳನ್ನು ಮಾಡುವ ಯಂತ್ರಗಳನ್ನು ಮತ್ತು ಅವುಗಳ ಉಪಕರಣಗಳನ್ನು, ವಿಶೇಷವಾಗಿ ಒಂದೇ ಅಳತೆಯ ಮಾಪುಗಳನ್ನು, ಪದ್ಧತಿಯ ಯಂತ್ರಗಳನ್ನು ಮತ್ತು ಭಾಗಗಳನ್ನು ಮಾಡುವದು ಅವಶ್ಯವಿರಬೇಕು;

(ಚ) ಅತ್ಯಂತ ಸರಿಯಾಗಿ ಕೆಲಸ ಕೊಡುವಂಥ ನಾಜೂಕ ಪದಾರ್ಥಗಳನ್ನು ಮಾಡುವದು ಅವಶ್ಯವಿರುವಾಗ; ಉದಾ: ಗಡಿಯಾರ, ಟೈಪರೈಟರ, ಪ್ರಯೋಗಶಾಲೆಯ ಸಾಧನಗಳು ಇತ್ಯಾದಿ;

(ಛ) ಯಾವಾಗ್ಯೂ ಬಹಳ ಜನರನ್ನು ಕೆಲಸಕ್ಕೆ ಹಚ್ಚಲು ಬರದಂಥ ಉದ್ಯೋಗಗಳಿದ್ದಲ್ಲಿ, ಇಂಥ ಉದ್ಯೋಗಗಳಿಂದ ತಯಾರಾದ ವಸ್ತುಗಳು ವಿಶೇಷವಾಗಿ ಸಾರ್ವಜನಿಕರಿಗೆ ಆವಶ್ಯಕವಿದ್ದಲ್ಲಿ; ಉದಾ : ನಲ್ಲಿಗಳು, ನಲ್ಲಿಗಳ ಬಾಯಿಗಳು;

(ಜ) ಸ್ವಂತ ಸಾಹಸದಿಂದ ಮಾಡಲಿಕ್ಕೆ ಬರದಂಥ ಆದರೆ ಸರಕಾರ ದಿಂದ ಅಥವಾ ಸರಕಾರದ ಅಂಕುಶದ ಕೆಳಗೆ ನಡೆಯುವಂಥ ಉದ್ಯೋಗ ಗಳು ಇದ್ದಲ್ಲಿ; ಉದಾ: ರೇಲುಗಾಡಿ, ಉಗಿಹಡಗ, ಮಹತ್ವದ ಕಣಿಗಳು, ಸೀಮೆ ಎಣ್ಣೆಯ ಬಾವಿಗಳು ಮುಂತಾದವುಗಳು. ಇಂಥ ಕಡೆಗಳಲ್ಲಿ ಎರಡನೆ ತರದ ಯಂತ್ರಗಳನ್ನು ಉಪಯೋಗಿಸಬಹುದು.

೫ ಎರಡನೆ ತರದ ಯಂತ್ರಗಳ ಸಹಾಯದಿಂದ ನಡೆಯುವ ಉದ್ಯೋಗ ಗಳು ಎಷ್ಟು ಆವಶ್ಯಕವಿರುವವೊ ಅಷ್ಟೇ ಅವುಗಳಿಗೆ ಬೇಕಾಗುವ ಕಾರಖಾನೆ ಗಳೂ ಆವಶ್ಯಕವಿರುವವು. ಉದಾ: ಕಬ್ಬಿಣ, ಉಪಕರಣಗಳು, ಯಂತ್ರಗಳು, ಕಾಜು, ವಿದ್ಯುತ್ ಮೊದಲಾದವುಗಳ ಮತ್ತು ಇವುಗಳಿಗೆ ಬೇಕಾಗುವ ಸಾಧನಗಳನ್ನು ತಯಾರಿಸುವ ಕಾರಖಾನೆಗಳು.

## ೧೨ ಅಂತರರಾಷ್ಟ್ರೀಯ ವ್ಯಾಪಾರ

೧ ಯಾವ ವಸ್ತುಗಳು ತಮ್ಮ ದೇಶದಲ್ಲಿ ಹುಟ್ಟುವದಿಲ್ಲವೊ ತಯಾರಿ ಸಲು ನೈಸರ್ಗಿಕ ಅನುಕೂಲತೆಗಳು ಇರುವದಿಲ್ಲವೊ ಅಥವಾ ಅತ್ಯಂತ ಕಷ್ಟ ದಿಂದ ಇಲ್ಲವೆ ಪರರನ್ನು ಪೀಡಿಸಿಯೆ ಉತ್ಪನ್ನಮಾಡಿಕೊಳ್ಳಲು ಬರುವವೊ, ತಮ್ಮ ಜೀವ ಸೋಸಿ ಯಾವುಗಳನ್ನು ತಯಾರಿಸುವ ಕಲೆಯನ್ನು ಪರದೇಶ ದವರು ಹಸ್ತಗತ ಮಾಡಿಕೊಂಡಿರುವರೊ ಮತ್ತು ಯಾವುಗಳಿಂದ ಅವರ ಉಪಜೀವನವು ನಡೆಯುತ್ತಿರುವದೊ, ಯಾವುಗಳು ಜೀವನದಲ್ಲಿ ಅಷ್ಟು ಮಹತ್ವದ ಕಾರ್ಯಗಳಿಗೆ ಉಪಯೋಗ ಬೀಳುವದಿಲ್ಲವೊ ಅಥವಾ ಯಾವುಗಳ ಹೊರತಾಗಿ ಕೋಟ್ಯಂತರ ಜನರ ಜೀವನವು ಸಾಗುವಂತೆ ಇರುವದೊ, ಅಥವಾ ಯಾವುಗಳ ಉಪಯೋಗವು ನಿತ್ಯಜೀವನದಲ್ಲಿ ಆಗುವದಿಲ್ಲವೊ, ಅಥವಾ ಯಾವುಗಳ ಹೊರತು ಸಾಮಾನ್ಯ ಜನರ ಜೀವನವು ಸುಸೂತ್ರವಾಗಿ ಸಾಗುವದೊ ಅಂಥ ವಸ್ತುಗಳ ಅಂತರರಾಷ್ಟ್ರೀಯ ವ್ಯಾಪಾರವನ್ನು ಮಾಡಬಹುದು.

೨ ಈ ವ್ಯಾಪಾರವನ್ನು ಮಾಡುವಾಗ ಯಾವ ತರದ ಬಲಾತ್ಕಾರವನ್ನೂ ಹಿಂಸೆಯನ್ನೂ ಮಾಡಬಾರದು, ಅಲ್ಲದೆ ರಾಜಾಧಿಕಾರವನ್ನು ಎಂದೂ ಉಪಯೋಗಿಸಕೂಡದು.

೩ ಮೇಲೆ ಹೇಳಿದಂಥ ವಸ್ತುಗಳನ್ನು ಯಾವದೆ ರೀತಿಯಿಂದಾಗಲಿ

ತಮ್ಮ ದೇಶದಲ್ಲಿಯೆ ತಯಾರಿಸಿಕೊಳ್ಳಲು ಆಗ್ರಹತೊಟ್ಟರೆ ಅದು ಅಧರ್ಮ ಕೂಡ ಎನಿಸುವದು.

೪ ಪ್ರಯೋಗಶಾಲೆಗಳಲ್ಲಿ ಉಪಯೋಗಿಸಲ್ಪಡುವಂಥ ಎಕ್ಸರೇಜು ಯಂತ್ರ, ವಿಶಿಷ್ಟತರದ ಗಡಿಯಾರ, ಕಾಶ್ಮೀರಿನ ಉಣ್ಣೆಯ ಬಟ್ಟೆ, ಕೇಸರಿ, ಯಾಲಕ್ಕಿ, ದಾಲಚಿನ್ನಿ ಮುಂತಾದ ವಿಶಿಷ್ಟ ಪ್ರಕಾರದ ವನಸ್ಪತಿಗಳು, ಮುಂತಾದ ವಸ್ತುಗಳು ಅಂತರರಾಷ್ಟ್ರೀಯ ವ್ಯಾಪಾರಕ್ಕೆ ಯೋಗ್ಯವಾದವುಗಳೆಂದು ಹೇಳಬಹುದು.

## ಸಪ್ತಮ ಖಂಡ

# ಉದ್ಯೋಗ

### ೧ ಒಕ್ಕಲತನ

೧ ಹಿಂದುಸ್ಥಾನಕ್ಕೆ ಒಕ್ಕಲತನವು ತನ್ನ ಪ್ರಾಣದಷ್ಟೆ ಪ್ರಿಯವಾದ ಉದ್ಯೋಗವು. ಹಿಂದುಸ್ಥಾನದ ಶೋಷಣವು ಮಿತಿಮೀರಿ ನಡೆದಿದ್ದರೂ ಈ ದೇಶವು ಈವರೆಗೂ ಜೀವಿಸಿದೆ. ಆಹಾರದ ವಿಷಯದಲ್ಲಿ ಪರಾವಲಂಬಿಯಾಗದಿದ್ದುದೆ ಇದಕ್ಕೆ ಕಾರಣವು. ಹಿಂದುಸ್ಥಾನದ ಈ ಸ್ವಾವಲಂಬನ ವೃತ್ತಿಗೂ ಈಗ ಕುತ್ತು ಉಂಟಾಗುವ ಸಂಭವವಿದೆ.

೨ ಹಿಂದುಸ್ಥಾನದ ಆರ್ಥಿಕ ಹಾಗೂ ರಾಜಕೀಯ ನೀತಿಯು ಒಕ್ಕಲತನವನ್ನು ನಾಶಮಾಡುತ್ತಲಿದೆ. ಆದ್ದರಿಂದ ಇಂದು ಒಕ್ಕಲತನವು ಒಂದು ಗಳಿಕೆಯ ಉದ್ಯೋಗವಾಗಿ ಉಳಿದಿರುವದಿಲ್ಲ.

೩ ಬ್ರಿಟಿಶ ರಾಜ್ಯತಂತ್ರದಲ್ಲಿ ಭೂಮಿಯ ಮೇಲಿನ ಕರದ ಭಾರವು ಮೊಟ್ಟ ಮೊದಲನೆಯ ಭಾರವೆಂದು ಕಾಯಿದೆಯಿಂದ ಪ್ರಸ್ಥಾಪಿಸಿದ್ದಾರೆ ಆದರೆ ಸ್ವರಾಜ್ಯದಲ್ಲಿ ಈ ಸಂಗತಿಯು ತದ್ವಿರುದ್ಧವಿರತಕ್ಕದ್ದು. ಒಕ್ಕಲತನ ಮಾಡುವವರ ಹೊರೆಯೆ ರಾಜ್ಯದ ಮೇಲಿರಬೇಕು ಮತ್ತು ತೆರಿಗೆ ಮುಂತಾದ

ಕರಗಳು ಒಕ್ಕಲತನಕ್ಕೆ ಬಾಧೆ-ಹಾನಿ ತಟ್ಟದಂತೆ ಹೇರಲ್ಪಡಬೇಕು ಮತ್ತು ವಸೂಲು ಮಾಡಲ್ಪಡಬೇಕು.

೪ ದೇಶಕ್ಕೆ ಸಾಕಷ್ಟು ಧಾನ್ಯವನ್ನು ಸಂಗ್ರಹಿಸಿ ಇಡಲು ಬರುವಂತೆ ಸ್ವರಾಜ್ಯದ ಆರ್ಥಿಕ ನೀತಿಯನ್ನು ರಚಿಸಬೇಕು.

೫ ಹಿಂದುಸ್ತಾನದಲ್ಲಿ ಈವರೆಗೂ ಹಣ್ಣುಹಂಪಲದ ಗಿಡಗಳ ಬೆಳೆವಣಿಗೆಯ ಕಡೆಗೆ ಸಾಕಷ್ಟು ಲಕ್ಷ್ಯಗೊಟ್ಟಿಲ್ಲ. ಇತ್ತಕಡೆ ವಿಶೇಷ ಗಮನಕೊಡತಕ್ಕದ್ದು.

೬ ಒಕ್ಕಲಿಗರು ಹೆಚ್ಚು ಇದ್ದ ಕಡೆಯಲ್ಲಿ ದನಗಳನ್ನು ಮೇಯಿಸುವದಕ್ಕೆ ಭೂಮಿಯ ಆವಶ್ಯಕತೆಯುಂಟು. ಒಕ್ಕಲು ಹಾಗೂ ಕಾಡಿನ ಖಾತೆಯ ನೀತಿಯು ದನಗಳನ್ನು ಸಾಕಲು ಬರುವಂತೆ ಇರತಕ್ಕದ್ದು ಮತ್ತು ದನಗಳ ಆಹಾರಕ್ಕಾಗಿಯೆ ಕೆಲವು ಹೊಲಗಳನ್ನು ಬೆಳೆಯತಕ್ಕದ್ದು.

೭ ಒಕ್ಕಲತನ ಹಾಗೂ ಇತರ ಉದ್ಯೋಗಗಳ ವಿಷಯದಲ್ಲಿ ಸದ್ಯದಲ್ಲಿ ಪ್ರಚಲಿತವಿರುವ ಧನೋತ್ಪಾದಕ ದೃಷ್ಟಿಯು ಇರಕೂಡದು. ಸುಂಕ, ಕಂದಾಯ, ಸಾಲ ಮುಂತಾದವುಗಳನ್ನು ಕೊಡತಕ್ಕ ಚಿಂತೆಯು ಜನರಿಗೆ ಇಲ್ಲದೆ ಇದ್ದರೆ ಅವರು ಉದ್ಯೋಗಗಳಿಂದ ತಯಾರಿಸಲ್ಪಟ್ಟ ಪದಾರ್ಥಗಳನ್ನು ಆದಷ್ಟು ಹೆಚ್ಚಿಗೆ ಮಾರಿ ಹೆಚ್ಚು ಬೆಲೆಯನ್ನು ಪಡೆಯುವ ಗೋಜಿಗೆ ಹೋಗುವದಿಲ್ಲ. ತಮ್ಮ ತಮ್ಮ ಕುಟುಂಬ, ಸಮಾಜ ಇಲ್ಲವೆ ಹಳ್ಳಿಗೆ ಎಷ್ಟು ಪದಾರ್ಥಗಳು ಎಷ್ಟೆಷ್ಟು ಬೇಕಾಗುವವೆಂಬ ದೃಷ್ಟಿಯಿಂದಲೆ ಉದ್ಯೋಗ ಮಾಡುವರು.

೮ ಈ ರೀತಿ ಒಕ್ಕಲಿಗನು ಮೊದಲು ಹುಲ್ಲು-ಹೊಟ್ಟು, ಧಾನ್ಯ ಮುಂತಾದ್ದನ್ನು ತನ್ನ ಹತ್ತರ ಸಂಗ್ರಹಿಸಿ ಇಟ್ಟುಕೊಳ್ಳುವ ವಿಚಾರವನ್ನೆ ಮಾಡುವನು; ಹೆಚ್ಚು ಲಾಭ, ಧಾರಣಿ ಇವುಗಳ ಕಡೆಗೆ ಗಮನವಿತ್ತು ಹತ್ತಿ, ಎಣ್ಣೆಕಾಳುಗಳು, ತಂಬಾಕು ಮುಂತಾದ ವಸ್ತುಗಳನ್ನು ಬೆಳೆಸಲು ಅವನು ಬಯಸುವದಿಲ್ಲ, ಅದರ ಗೋಜಿಗೂ ಹೋಗುವದಿಲ್ಲ.

೯ ಹೆಚ್ಚು ಹಣವನ್ನು ಸಂಪಾದಿಸಬೇಕೆಂದು ವ್ಯಾಪಾರದ ದೃಷ್ಟಿಯಿಂದ ಒಕ್ಕಲತನ ಮಾಡಿದರೆ ಕೊನೆಯಲ್ಲಿ ಅವನಿಗೆ ಲಾಭವು ಆಗುವದೆ ಇಲ್ಲ. ಒತ್ತಟ್ಟನಿಂದ ಬಂದ ಹಣವು ಇನ್ನೊಂದು ಕಡೆಗೆ ಹೊರಟುಹೋಗುವದು. ಇದರಿಂದ ನೈತಿಕಬಲಕ್ಕೆ ಹಾನಿಯೂ ತಟ್ಟುವದು. ಸ್ವತಃ ತಾವು ಮಾಡುತ್ತಿರುವ ಒಕ್ಕಲತನದಿಂದ ತಮ್ಮ ಮತ್ತು ಅನ್ಯರ ಶಾರೀರಿಕ, ಮಾನಸಿಕ

ಮತ್ತು ನೈತಿಕ ಹಾನಿಯು ಎಷ್ಟಾಗುತ್ತಿರುವದೆಂಬ ವಿಚಾರ ಮಾಡುವ ಕರ್ತವ್ಯಬುದ್ಧಿಯೆ ಅವರಲ್ಲಿ ಉಂಟಾಗುವದಿಲ್ಲ, ಅದು ನಾಶವಾಗಿ ಹೋಗುತ್ತದೆ. ಅವರು ತಂಬಾಕು, ಅಫೀಮು ಮುಂತಾದವುಗಳನ್ನು ಬೆಳೆಯಿಸುವದೆ ಇದಕ್ಕೆ ಸಾಕ್ಷಿ.

## ೨ ಪೋಷಕ ಇಲ್ಲವೆ ಪೂರಕ ಉದ್ಯೋಗಗಳು

೧ ಹಿಂದುಸ್ತಾನದಲ್ಲಿ ಒಕ್ಕಲತನಕ್ಕೆ ಎಷ್ಟೋ ನೈಸರ್ಗಿಕ ಸಂಕಟಗಳು ಇರುವವು, ಅವುಗಳನ್ನು ದೂರಮಾಡಲು ಅನೇಕ ಉಪಾಯಗಳನ್ನು ಮಾಡಿದರೂ ಅವು ಸ್ವಲ್ಪ ಹೆಚ್ಚುಕಡಿಮೆ ಪ್ರಮಾಣದಲ್ಲಿ ಇರತಕ್ಕವೆ. ಒಕ್ಕಲತನವು ಹನ್ನೆರಡು ತಿಂಗಳು ಮಾಡುವಂಥ ಉದ್ಯೋಗವಾಗಿರಲಾರದು. ಒಕ್ಕುವ ದಿನಗಳಲ್ಲಿಯೂ ಸತತವಾಗಿ ಒಕ್ಕಲಿಗರು ಶ್ರಮಮಾಡಬೇಕಾಗುವದಿಲ್ಲ, ಹಾಗೂ ಒಂದೊಂದು ಸಲ ಬಿಡಿದಿನಗಳಲ್ಲಿಯೂ ಹೆಚ್ಚು ಕೆಲಸಗಾರರು ಬೇಕಾಗುವರು. ಆ ಮಧ್ಯದ ಬಿಡುವಿನ ಕಾಲದಲ್ಲಿ ಭೂಮಿಯ ಒಡೆಯರೂ ಅವರ ಮನೆಯವರೂ ನಿರುದ್ಯೋಗಿಗಳಾಗಿರುವರು. ಅದಕ್ಕೋಸ್ಕರ ಒಕ್ಕಲತನದ ಜೊತೆಗೆ ಯಾವದಾದರೊಂದು ಪೋಷಕ ಉದ್ಯೋಗವು ಬೇಕೇಬೇಕು. ಆದ್ದರಿಂದ ಒಕ್ಕಲತನ ಮತ್ತು ಉದ್ಯೋಗ ಇವೆರಡರಲ್ಲಿ ಒಂದನ್ನು ಇನ್ನೊಂದರಿಂದ ಬೇರ್ಪಡಿಸಲಿಕ್ಕಾಗುವದಿಲ್ಲ.

೨ ಪೋಷಕ ಉದ್ಯೋಗಗಳಿಗೆ ಕೆಳಗಿನ ಅನುಕೂಲತೆಗಳಿರಬೇಕು.

(ಕ) ಅವು ಮುಖ್ಯವಾದ ಉದ್ಯೋಗ (ಒಕ್ಕಲತನ) ಕ್ಕೆ ಅನುಕೂಲವಾಗಿ ಇರುವಂಥವು ಇರತಕ್ಕದ್ದು, ಅವಕ್ಕಾಗಿ ಒಕ್ಕಲತನವನ್ನು ಕೆಡಿಸುವಂಥ ಪ್ರಸಂಗವು ಬರಕೂಡದು.

(ಖ) ಮುಖ್ಯ ಉದ್ಯೋಗಕ್ಕೋಸ್ಕರ ಶ್ರಮಮಾಡಬೇಕಾದ ಪ್ರಸಂಗ ಬಂದಾಗ ಕೂಡ ಹಾನಿಯಾಗದಂತೆ ಅವುಗಳನ್ನು ಊರ್ಜಿತ ಸ್ಥಿತಿಯಲ್ಲಿ ಇಟ್ಟುಕೊಳ್ಳಲು ಬರುವಂಥವು ಇರಬೇಕು ಅಥವಾ ಹೆಚ್ಚು ಗಮನವನ್ನು ಅಪೇಕ್ಷಿಸದೆ ಸರಿಯಾಗಿ ನಡೆದುಕೊಂಡು ಹೋಗುವಂಥವು ಇರಬೇಕು.

(ಗ) ಮೇಲಾಗಿ ಇವು ನಿತ್ಯ ನೋಕರಿಯ ಉದ್ಯೋಗಗಳಾಗಿರದೆ ಸ್ವತಂತ್ರ ಕೂಲಿಯ ದಂಧೆಗಳಾಗಿರಬೇಕು.

(ಘ) ಮೇಲೆ ವಿವರಿಸಿದ ಕಾರಣಗಳಿಗನುಸಾರವಾಗಿರುವ ಉದ್ಯೋಗ

ಗಳಿಗೆ ಬೇಕಾಗುವ ಯಂತ್ರ ಇಲ್ಲವೆ ಸಾಮುಗ್ರಿಗಳಿಗೋಸ್ಕರ ನಿರ್ಧನಪ್ರಜರು ಶಕ್ತಿಮೀರಿ ಬಂಡವಾಳ ಹಾಕುವಂಥ ಪ್ರಸಂಗವು ಬರಕೂಡದು.

(ಚ) ಆ ಉದ್ಯೋಗಗಳು ಹೊಲಗಳ ಬಳಿಯಲ್ಲಿ ಅಥವಾ ಮನೆಯಲ್ಲಿ ಇಲ್ಲವೆ ಹಳ್ಳಿಯಲ್ಲಿಯೆ ಕುಳಿತು ಮಾಡಲು ಬರುವಂಥವಿರಬೇಕು.

(ಛ) ಈ ಉದ್ಯೋಗಗಳನ್ನು ಬಹಳ ಜನರು ಮಾಡಿದರೂ ಅವುಗಳಿಂದ ಉತ್ಪನ್ನವಾದ ವಸ್ತುಗಳು ಹೆಚ್ಚು ವೆಚ್ಚವಾಗುವಂಥವು ಇರಬೇಕು. ಎಂದರೆ ಅವು ಸರ್ವಪ್ರಿಯ ಮತ್ತು ಸರ್ವರಿಗೂ ಬೇಕಾಗುವಂಥವು ಇರಬೇಕು.

(ಜ) ಬಹಳ ಜನರಿಗಾಗಿ ಆ ಉದ್ಯೋಗಗಳ ವ್ಯವಸ್ಥೆಯನ್ನು ಮಾಡಿಕೊಡಬೇಕಾದ ಪ್ರಸಂಗವು ಬಂದರೆ ಅಷ್ಟು ಪ್ರಮಾಣದಲ್ಲಿ ಭರದಿಂದಲೂ ಸರಳವಾಗಿಯೂ ಕಡಿಮೆ ವೆಚ್ಚದಿಂದ ಯಂತ್ರಾದಿಗಳನ್ನು ಉಪಯೋಗಿಸಿ ಮಾಡಿಕೊಡಲು ಬರುವಂತೆ ಅವು ಇರಬೇಕು.

(ಝ) ಪುನಃ ಸಾವಿರಾರು ಜನರ ದೃಷ್ಟಿಯಿಂದಲೂ ಆ ಉದ್ಯೋಗಗಳು ಅಶಿಕ್ಷಿತ, ಮಂದಬುದ್ಧಿಯ ನಿರ್ಬಲ, ಚಿಕ್ಕ-ದೊಡ್ಡ ಸರ್ವಪ್ರಕಾರದ ಜನರಿಗೂ ಮಾಡಲು ಬರುವಂತೆ ಇರಬೇಕು.

(ಟ) ಮೇಲಾಗಿ ಕೆಲಸ ಮಾಡುವಾಗ ಮನುಷ್ಯನನ್ನು ಜಡಯಂತ್ರಗಳಂತೆ ಆನಂದರಹಿತ, ರಸಹೀನ ಮಾಡುವಂಥವು ಅವು ಇರಕೂಡದು ಮತ್ತು ಕೆಲಸವು ಮುಗಿದ ಬಳಿಕ ಬೇಸರ ಹುಟ್ಟಿಸುವಂಥವೂ ದಣಿಸುವಂಥವೂ ಇರಕೂಡದು.

೩ ಈ ಪೋಷಕ ಉದ್ಯೋಗಗಳಲ್ಲಿ ನೂಲುವ ರಾಟೆಯು ಮತ್ತು ಗೋಪಾಲನೆ ಇವೆರಡಕ್ಕೆ ಪ್ರಮುಖ ಸ್ಥಾನವನ್ನು ಕೊಡತಕ್ಕದ್ದು. ಪ್ರಾಚೀನ ಕಾಲದಿಂದಲೂ ಇವೆರಡೂ ಉದ್ಯೋಗಗಳು ಒಕ್ಕಲತನದೊಡನೆ ನಡೆದು ಬಂದಿರುವವು, ಅಲ್ಲದೆ ದೀರ್ಘಕಾಲದ ಒರೆಗಲ್ಲಿಗೆ ಹತ್ತಿ ಪಾರಾಗಿ ಬಂದಿರುವವು.

೪ ತಂತಿ, ಅಂಚೆ, ಉಗಿಬಂಡಿ ಮೊದಲಾದವು ಅಖಿಲ ಭಾರತೀಯ ಖಾತೆಗಳೆನಿಸುವವು. ಇವುಗಳಂತೆಯೆ ರಾಟೆ ಮತ್ತು ಗೋಪಾಲನೆಯು ಅಖಿಲ ಭಾರತದ ದೃಷ್ಟಿಯಿಂದ ಅತ್ಯಂತ ಮಹತ್ವವುಳ್ಳವಾಗಿರುವವು. ದೊಡ್ಡ ಪ್ರಮಾಣದಲ್ಲಿ ಮತ್ತು ಶಕ್ಯವಿದ್ದಷ್ಟು ಬಹಳ ಜನರು ಸರಳವಾಗಿ ಮತ್ತು ಅನುಕೂಲತೆಗಳಿಗೆ ಅನುಸಾರವಾಗಿ ಮಾಡಲು ಬರುವಂಥ ಉದ್ಯೋಗಗಳು ಆಗಿರುವವು.

೫ ಮುಂದಿನ ಪ್ರಕರಣಗಳಲ್ಲಿ ಈ ಎರಡೂ ಉದ್ಯೋಗಗಳನ್ನು ಕುರಿತು ಹೆಚ್ಚು ವಿಸ್ತಾರವಾದ ವಿಚಾರವು ಬರುವದು. ಗೋಪಾಲನೆಯ ಉದ್ಯೋಗಕ್ಕೆ ಭೂಮಿಯೂ ಬಂಡವಾಳವೂ ಸ್ವಲ್ಪ ಹೆಚ್ಚು ಬೇಕು. ಆದ್ದರಿಂದ ಇದು ಸ್ವಂತ ಭೂಮಿಯಿದ್ದ ಒಕ್ಕಲಿಗರ ಪೋಷಕ ಉದ್ಯೋಗವಾಗಬಹುದು, ಆದರೆ ಕೂಲಿ ಮಾಡಿ ಉಪಜೀವನ ಮಾಡುವಂಥ ಸಹಸ್ರಾರು ಜನಗಳ ಉದ್ಯೋಗವಾಗಲಾರದು. ಮೇಲಾಗಿ ಸ್ವತಂತ್ರ ಉದ್ಯೋಗ ಕೂಡ ಆಗಬಹುದು. ಆದರೆ ನೂಲುವ ಉದ್ಯೋಗವು, ಗೋಪಾಲನೆ ಮತ್ತು ಒಕ್ಕಲತನ ಇವೆರಡರ ಜೊತೆಗೂ ನಡೆಯಬಲ್ಲದು. ಈ ದೃಷ್ಟಿಯಿಂದ ಗೋಪಾಲನೆಗಿಂತ ರಾಟಿಗೆ ಹೆಚ್ಚು ಮಹತ್ವವು ಕೊಡಲ್ಪಡುತ್ತಿದೆ. ಆದರೂ ಗೋಪಾಲನೆ ಮತ್ತು ನೂಲುವದು ಇವೆರಡೂ ಒಕ್ಕಲಿಗರಿಗೆ ಪೂರಕ ಉದ್ಯೋಗಗಳಾಗಬಲ್ಲವು.

೬ ರಾಟಿಗೆ ಹೆಚ್ಚು ಮಹತ್ವವು ಕೊಡಲ್ಪಡುತ್ತಿದೆ ಅಥವಾ ಹೆಚ್ಚು ಮಹತ್ವವನ್ನು ಕೊಡತಕ್ಕದ್ದು, ಎಂಬ ಮಾತಿನಲ್ಲಿ ರಾಟಿಯ ಹೊರತು ಇನ್ನಾವ ಉದ್ಯೋಗಗಳೂ ಇರದೆಂಬ ಭಾವವಿಲ್ಲ. ಸ್ಥಾನಿಕ ಪರಿಸ್ಥಿತಿಯು ಅನುಕೂಲವಿದ್ದು ನೂಲುವ ಉದ್ಯೋಗಕ್ಕಿಂತಲೂ ಹೆಚ್ಚು ಲಾಭಕಾರಿಯಾದ ಪೂರಕ ಉದ್ಯೋಗಗಳನ್ನು ಮಾಡಲಿಕ್ಕೆ ಬರುವ ಹಾಗಿದ್ದರೆ ನೂಲುವ ಉದ್ಯೋಗದ ಬದಲಾಗಿ ಅಥವಾ ಸಂಗಡ ಅವನ್ನು ಮಾಡಬಹುದು. ಸ್ಥಾನಿಕ ರಾಜ್ಯತಂತ್ರವೂ ಪ್ರಜಾತಂತ್ರವೂ ಈ ಉದ್ಯೋಗಗಳ ಕಡೆಗೆ ಹೆಚ್ಚು ಗಮನ ಕೊಟ್ಟು ಅವನ್ನು ಬೆಳೆಸಲು ಯತ್ನಿಸಬೇಕು, ಹೀಗೆ ಮಾಡುವದು ಅವುಗಳ ಕರ್ತವ್ಯಕರ್ಮವಾಗಿರುವದು.

೭ ಯಾವ ಹಳ್ಳಿಯಲ್ಲಿ ಯಾವ ಕಚ್ಚಾ ಮಾಲು ಹುಟ್ಟುವದೊ ಅದನ್ನು ಸಂಗ್ರಹಿಸಲಿಕ್ಕೂ ಮಾರಲಿಕ್ಕೂ ಮತ್ತು ಮನುಷ್ಯನ ಉಪಯೋಗಕ್ಕೆ ಯೋಗ್ಯವನ್ನಾಗಿ ಮಾಡುವದಕ್ಕೂ ಯಾವ ಕ್ರಿಯೆಗಳು ಬೇಕಾಗುವವೊ ಅವೆಲ್ಲವೂ ಅದೇ ಹಳ್ಳಿಯಲ್ಲಿ ಆಗಬೇಕು ಅಂದರೆ ಕಚ್ಚಾಮಾಲು ತಯಾರಿಸುಪವನು ಅಲ್ಲಿಯೆ ಇರತಕ್ಕದ್ದು. ಉದಾ: ಪರದೇಶ ಮತ್ತು ಪಟ್ಟಣಗಳಿಗೆ ಭತ್ತವು ಹೋಗುವದಿಲ್ಲ, ಅಕ್ಕಿಯು ಹೋಗುತ್ತದೆ ಮತ್ತು ಅದೇ ತಿನ್ನಲು ಯೋಗ್ಯವಾದದ್ದು. ಗೋದಿಯ ಬದಲು ಹಿಟ್ಟು ದೊಡ್ಡ ಪ್ರಮಾಣದಲ್ಲಿ ಪರದೇಶ ಮತ್ತು ಪಟ್ಟಣಗಳಿಗೆ ಹೋಗುತ್ತದೆ ಮತ್ತು ಆ ಹಿಟ್ಟಿನಿಂದ ತಯಾರಿಸಲ್ಪಟ್ಟ ರೊಟ್ಟಿ, ಬಿಸ್ಕೀಟು ಮುಂತಾದವುಗಳ ಮಾರಾಟವೂ

ಚೆನ್ನಾಗಿ ಆಗುತ್ತದಲ್ಲದೆ, ಜನರೂ ಈ ಪದಾರ್ಥಗಳನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ; ಕಬ್ಬಿನಿಂದ ಬೆಲ್ಲವನ್ನೂ ಸಕ್ಕರೆಯನ್ನೂ ಮಾಡಿದ ಮೇಲೆಯೆ ತಿನ್ನಲಿಕ್ಕೆ ಬರುವದು. ಎಣ್ಣೆಕಾಳುಗಳ ಉಪಯೋಗವು ಎಣ್ಣೆ ಮಾಡಿದ ಮೇಲೆಯೆ ಹೆಚ್ಚಾಗಿ ಆಗುವದು. ಹತ್ತಿಯ ಉಪಯೋಗವು ಬಟ್ಟೆಯಿಂದಾಗುವದು. ಚರ್ಮದಿಂದ ತಯಾರಿಸಲ್ಪಟ್ಟ ವಸ್ತುಗಳ ಮುಖಾಂತರವೆ ಚರ್ಮದ ಉಪಯೋಗವಾಗುವದು. ಆದುದರಿಂದ ಭತ್ತ ಕುಟ್ಟುವ, ಹಿಟ್ಟು ಬೀಸುವ, ಬಿಸ್ಕೀಟು ರೊಟ್ಟಿ ಮಾಡುವ, ಎಣ್ಣೆ ತೆಗೆಯುವ, ನೇಯುವ, ಚರ್ಮ ಹೊಲಿಯುವ ಕೆಲಸಗಳು ಕೂಡ ಗ್ರಾಮದಲ್ಲಿಯೆ ಆಗತಕ್ಕದ್ದು. ಈ ಉದ್ಯೋಗಗಳು ಒಕ್ಕಲಿಗರ, ಹಳ್ಳಿಗರ ಪೂರಕ ಉದ್ಯೋಗಗಳಾಗಬಹುದು.

೮ ಇಂಥ ಉದ್ಯೋಗಗಳು ಪೂರಕ ಉದ್ಯೋಗಗಳಾಗಿ ನಡೆದರೆ ಹಳ್ಳಿಗರಿಗೆ ಎಷ್ಟೋ ಲಾಭವಾಗುವದು. ಉದಾ: ಭತ್ತದ ಗೊಳಲಿ, ತವಡು, ಗೋದಿಯ ಹೊಟ್ಟು, ಕಬ್ಬಿನ ಸಪ್ಪೆ, ಎಣ್ಣೆಕಾಳಿನ ಹಿಂಡಿ, ಹತ್ತಿಯ ಕಾಳು, ನೂಲಿನ ಗುಂಜು ಮುಂತಾದ ವಸ್ತುಗಳು ದನಗಳಿಗಾಗಿ ಉಪಯೋಗವಾಗುವವು, ಅಥವಾ ಗೊಬ್ಬರವಾಗುವವು; ಇವುಗಳಿಂದ ಬೇರೆ ಉದ್ಯೋಗಗಳೂ ಹುಟ್ಟಬಹುದು.

## ೩ ಸಂಪೂರ್ಣ ಸ್ವದೇಶಿ

೧ ಸ್ವದೇಶೀ ವಸ್ತುಗಳಿಗೆ ಉತ್ತೇಜನವನ್ನು ಕೊಡತಕ್ಕದ್ದು. ಸ್ವದೇಶೀ ಧರ್ಮದ ಪಾಲನೆಯಲ್ಲಿಯೆ ಈ ವಿಷಯದ ಸಮಾವೇಶವಾಗಿಬಿಡುತ್ತದೆ. ಸ್ವದೇಶೀ ವಸ್ತುಗಳಿಗೆ ಪ್ರೋತ್ಸಾಹನೆಯನ್ನು ಕೊಡತಕ್ಕದ್ದೆಂದು ಹೂಡುವ ಚಳವಳಿಯಲ್ಲಿ ವಿವೇಕದ ಅವಶ್ಯಕತೆ ಇರುವದು.

೨ ವಿವೇಕದಿಂದ ವಿಚಾರ ಮಾಡದಿದ್ದರೆ ಸ್ವದೇಶಿಯ ಹೆಸರಿನಿಂದ ತಿಳಿದಾಗಲಿ, ತಿಳಿಯದೆ ಆಗಲಿ ಆಡಂಬರವು ಹೆಚ್ಚಾಗುವದು, ಅನೇಕ ಕಾರ್ಯಕರ್ತರ ಶಕ್ತಿಯು ವ್ಯರ್ಥವಾಗುವದು ಮತ್ತು ಆತ್ಮಹಾನಿಯಾಗುವದು.

೩ ಯಾವ ವಸ್ತುಗಳ ಪ್ರಚಾರಕ್ಕೋಸ್ಕರ ಹೆಚ್ಚು ಸಹಾಯ ಮಾಡುವದು ಅವಶ್ಯವಿರುವದಿಲ್ಲವೊ ಅಥವಾ ಜಾಹೀರಾತಿನ ಅವಶ್ಯಕತೆ ಇರುವದಿಲ್ಲವೊ ಅಂಥ ವಸ್ತುಗಳ ಪ್ರದರ್ಶನವನ್ನು ಕಾರ್ಯಕರ್ತರು ಜರಗಿಸುವದು ಅಗತ್ಯವಿರುವದಿಲ್ಲ. ಏಕೆಂದರೆ ಹಾಗೆ ಮಾಡಿದರೆ ಅವುಗಳ ಬೆಲೆಯು

ಹೆಚ್ಚಾಗಿ, ಒಬ್ಬರು ಇನ್ನೊಬ್ಬರೊಡನೆ ಮೇಲಾಟ ಹೂಡಿ ವೈರವನ್ನು ಕಟ್ಟಿಕೊಳ್ಳುವ, ಅನಿಷ್ಟವಾದ ಜಗಳವು ಬೆಳೆಯುವ ಸಂಭವವುಂಟು.

೪ ಉದಾಹರಣಾರ್ಥವಾಗಿ ಬಟ್ಟೆಯ ಗಿರಣಿ, ಸಕ್ಕರೆಯ ಗಿರಣಿ ಅಕ್ಕಿಯ ಗಿರಣಿಗಳಿಗೆ ಸಹಾಯ ಮಾಡುವದು ಅವಶ್ಯವೆನಿಸುವದಿಲ್ಲ. ಇದೇ ರೀತಿ ಕಾಗದಗಳ ದೇಶೀ ಗಿರಣಿ, ಎಣ್ಣೆಯ ಗಿರಣಿ, ಪರದೇಶೀ ಔಷಧಗಳನ್ನು ತಯಾರಿಸುವ ದೇಶೀ ಕಾರಖಾನೆ, ಸಬಕಾರ, ದಂತಮಂಜನ, ಬ್ರಶ್ ಮುಂತಾದ ಪದಾರ್ಥಗಳನ್ನು ಮಾಡುವ ಕಾರಖಾನೆ, ಚರ್ಮದ ದೊಡ್ಡ ಕಾರ-ಖಾನೆ ಮುಂತಾದವುಗಳೂ ಸಹಾಯಕ್ಕೆ ಪಾತ್ರವೆಂದು ಹೇಳಲಾಗದು.

೫ ಪರದೇಶೀ ಕಾಗದ, ಸಕ್ಕರೆ, ಅಕ್ಕಿ, ಬಟ್ಟೆ, ಎಣ್ಣೆ, ಔಷಧ, ಸಾಬಾಣ, ದಂತಮಂಜನ, ಬ್ರಶ್ ಮೊದಲಾದ ಪದಾರ್ಥಗಳನ್ನು ಉಪಯೋಗಿಸಕೂಡ ದೆಂಬ ಕಟ್ಟಪ್ಪಣೆ ಇಲ್ಲವೆಂದು ಇದರ ಅರ್ಥವಾಗುವದಿಲ್ಲ. ಪರದೇಶದ ದಾಳಿಯನ್ನು ತಡೆಯುವಷ್ಟು ಶಕ್ತಿಯು ಯಾವುಗಳಲ್ಲಿ ಇಲ್ಲವೊ ಅವಕ್ಕೆ ಪೂರ್ಣ ಸಹಾಯವನ್ನೀಯಬೇಕು ಮತ್ತು ಯಾರು ಈ ವಸ್ತುಗಳನ್ನು ಉಪಯೋಗಿಸಲೇಬೇಕಾಗಿದೆಯೊ ಅವರೇ ಅವುಗಳಿಗೆ ಮನ್ನಣೆಯನ್ನೀಯಬೇಕು.

೬ ಇವತ್ತು ನಡೆಯಬೇಕಾದ ಸ್ವದೇಶೀ ಚಳವಳಿಯು ಈ ವಸ್ತುಗಳಿಗೋಸ್ಕರವಲ್ಲ. ಇಂದು ಗ್ರಾಮೋದ್ಯೋಗಗಳನ್ನು ಸಂರಕ್ಷಿಸಬೇಕಾಗಿದೆ. ಎಂದರೆ ಖಾದಿ, ಬೆಲ್ಲ, ಹಳ್ಳಿಯಲ್ಲಿ ತಯಾರಾದ ಸಕ್ಕರೆ, ಕೈಯಿಂದ ಕುಟ್ಟಿದ ಅಕ್ಕಿ, ಹಳ್ಳಿಯ ಕಾಗದ, ಗಾಣದ ಎಣ್ಣೆ, ಹಳ್ಳಿಯಲ್ಲಿ ತಯಾರಿಸಲ್ಪಟ್ಟ ಪಾತ್ರೆಗಳು, ಅಂಟಳಕಾಯಿ, ಹಲ್ಲುಜ್ಜುವ ಕಡ್ಡಿ, ಕಸಬರಿಗೆ, ಹುಲ್ಲಿನ ಚಾಪೆ, ಬುಟ್ಟಿ, ಹಗ್ಗ, ಗುಡಾರ, ಚರ್ಮದ ವಸ್ತುಗಳು ಮುಂತಾದ ನೂರಾರು ಹಳ್ಳಿಯ ಉದ್ಯೋಗಗಳು ಪ್ರೋತ್ಸಾಹನವಿಲ್ಲದೆ ಸತ್ತುಹೋಗಿವೆ. ಇಂಥ ಉದ್ಯೋಗಗಳಿಗೆ ಜೀವದಾನವನ್ನು ಕೊಡುವದು ಹೆಚ್ಚು ಅಗತ್ಯವಿದೆ.

೭ ಈ ವಿಷಯದಲ್ಲಿ ಇವತ್ತು ಪಟ್ಟಣಿಗರೂ ಶಿಕ್ಷಿತರೂ ಹಳ್ಳಿಗಳ ಬಗ್ಗೆ ತೋರಿಸುವ ಅಲಕ್ಷ್ಯವು ಅಕ್ಷಮ್ಯವಾದುದು.

೮ ಸ್ವಲ್ಪ ವರ್ಷಗಳ ಮೊದಲು ಹಳ್ಳಿಗರು ತಮಗೆ ಬೇಕಾಗುವ ಎಷ್ಟೋ ಪದಾರ್ಥಗಳನ್ನು ತಾವೇ ತಯಾರಿಸಿಕೊಳ್ಳುತಿದ್ದರು. ಇಷ್ಟೇ ಅಲ್ಲ, ಎಷ್ಟೋ ಜನರು ದೈನಿಕ ಉಪಯೋಗಕ್ಕೆ ಬೇಕಾಗುವ ವಸ್ತುಗಳಿಗಾಗಿ ಹಳ್ಳಿಗರನ್ನು ಅವಲಂಬಿಸಿ ಇರಬೇಕಾಗುತಿತ್ತು. ಆದರೆ ಈಗ ಅದರ ಬದಲಾಗಿ ಅವರು

ಪಟ್ಟಣ ಇಲ್ಲವೆ ಪರದೇಶಗಳಿಂದ ಆ ವಸ್ತುಗಳನ್ನು ತರಿಸಿಕೊಳ್ಳುತ್ತಾರೆ, ಮತ್ತು ಪರಂಪರೆಯಿಂದ ನಡೆದು ಬಂದ ಹಳ್ಳಿಗರ ಉದ್ಯೋಗಗಳು ಈಗ ನಿಂತುಹೋಗಿವೆ. ಈ ಬಗ್ಗೆ ಪಟ್ಟಣಿಗರೂ ಶಿಕ್ಷಿತರೂ ಎಳ್ಳಷ್ಟೂ ವಿಚಾರ ಮಾಡಿಲ್ಲ.

೯ ಈ ಮೂಲಕ ಇವತ್ತು ಹಳ್ಳಿಗರು ಕಂಗಾಲರಾಗಿದ್ದಾರೆ, ಪರಾವಲಂಬಿಗಳಾಗಿದ್ದಾರೆ. ಐವತ್ತು ವರ್ಷಗಳ ಹಿಂದಿನ ಹಳ್ಳಿಗರಲ್ಲಿದ್ದಷ್ಟು ವಿದ್ಯಾಬುದ್ಧಿಯು ಇವತ್ತಿನ ಹಳ್ಳಿಗರಲ್ಲಿ ಇರುವದಿಲ್ಲ. ಹಳ್ಳಿಯ ಕಲಾವಿದರಲ್ಲಿಯೂ ಉಳಿದ ಹಳ್ಳಿಗರಂತೆಯೇ ಅವಿದ್ಯೆಯೂ, ಅಬುದ್ಧಿಯೂ ಮನೆಮಾಡಿದೆ.

೧೦ ಸೃಷ್ಟಿಯೆ ಒದಗಿಸಿಕೊಟ್ಟ ಬಿಡುವಿನ ಸಮಯವನ್ನೆಲ್ಲ ಹಳ್ಳಿಗರೆಲ್ಲರೂ ಯಾವದಾದರೊಂದು ಉಪಯೋಗಿ ಕಾರ್ಯದಲ್ಲಿ ಕಳೆಯಬೇಕೆಂಬ ನಿಶ್ಚಯವನ್ನೂ ಪಟ್ಟಣಿಗರು ಹಳ್ಳಿಗಳಲ್ಲಿ ಉತ್ಪನ್ನವಾದ ವಸ್ತುಗಳನ್ನೆ ಕೊಳ್ಳುವೆವೆಂಬ ಪ್ರತಿಜ್ಞೆಯನ್ನೂ ಮಾಡಿದಾಗಲೆ ಹಳ್ಳಿಗರ ಮತ್ತು ಪಟ್ಟಣಿಗರ ಮುರಿದುಹೋದ ಸಂಬಂಧವು ಪುನಃ ಪ್ರಸ್ಥಾಪಿಸಲ್ಪಡುವದು.

೧೧ ಈ ಕಾರ್ಯಕ್ಕಾಗಿ ದೇಶಭಕ್ತರದೊಂದು ದೊಡ್ಡ ಸೈನ್ಯವು ಸಿದ್ಧವಾದರೂ ಸಾಲಲಿಕ್ಕಿಲ್ಲ. ಸ್ವದೇಶಿ ಸಂಘಗಳು ಎಷ್ಟು ಕಾರ್ಯಕ್ಷೇತ್ರದಲ್ಲಿ ಇವತ್ತು ಕೆಲಸ ಮಾಡುತ್ತಿರುವವೊ ಅಷ್ಟಂತೂ ಇದ್ದೇ ಇವೆ. ಆದರೆ ಇದಕ್ಕಿಂತಲೂ ಹೆಚ್ಚಿಗೆ ಕಾರ್ಯಮಾಡುವದಕ್ಕೋಸ್ಕರ ಬೇಕಾದಷ್ಟು ವಿಶಾಲವಾದ ಕ್ಷೇತ್ರವು ಹಾಗೆಯೆ ಉಳಿದುಕೊಂಡಿದೆ. ಎಷ್ಟೋ ಉದ್ಯೋಗಗಳನ್ನು ಹುಡುಕಿ ತೆಗೆಯಬೇಕಾಗಿದೆ. ನಾನಾತರದ ಕಲಾವಿದರ ಹಿತವನ್ನು ಸಾಧಿಸಬೇಕಾಗಿದೆ. ಇಂದು ನಿರುದ್ಯೋಗದಿಂದ ಹೊಟ್ಟೆಗಿಲ್ಲದೆ ಸಾಯುವವರು ಪ್ರಾಮಾಣಿಕತನದಿಂದಲೂ ಮರ್ಯಾದೆಯಿಂದಲೂ ಇಂಥ ಕೆಲಸಗಳನ್ನು ಮಾಡಿ ಹೊಟ್ಟೆತುಂಬಿಕೊಳ್ಳಬಹುದು.

೧೨ ಇದೇ ನಿಜವಾದ ಸಫಲವಾಗುವ ಸಂಪೂರ್ಣ ಸ್ವದೇಶಿಯು.

## ೪ ವಿಶೇಷ ಉದ್ಯೋಗಗಳು

೧ ಸಮಾಜದ ನಿರ್ವಾಹವು ಸಾಗಬೇಕಾದರೆ ಮತ್ತು ಅದರ ಸಮೃದ್ಧಿ ಮತ್ತು ಉನ್ನತಿ ಆಗಬೇಕಾದರೆ ಒಕ್ಕಲತನ ಮತ್ತು ನೂಲುವದು ಇವೆರಡೆ ಉದ್ಯೋಗಗಳು ಸಾಲವು, ಇವುಗಳ ಹೊರತಾಗಿ ಇನ್ನೂ ಎಷ್ಟೋ ಉದ್ಯೋಗ

ಗಳ ಅವಶ್ಯಕತೆಯುಂಟು. ಉದಾ: ಧಾತುಗಳು, ಕಲ್ಲಿದ್ದಲು, ಸೀಮೆ (ಚಿಮಣಿ) ಎಣ್ಣಿ ಮುಂತಾದವುಗಳ ಕಣಿಗಳು ಮತ್ತು ಖನಿಜ ಪದಾರ್ಥಗಳಿಗೆ ಸಂಬಂಧಪಟ್ಟ ಉದ್ಯೋಗಗಳು, ಉಪ್ಪು, ಮೀನ ಮುಂತಾದ ಸಮುದ್ರದ ಪದಾರ್ಥಗಳಿಗೆ ಸಂಬಂಧಪಟ್ಟ ಉದ್ಯೋಗಗಳು; ಕಟ್ಟಿಗೆ, ಅರಗು, ರಬ್ಬರು, ವನಸ್ಪತಿ ಔಷಧ ಮುಂತಾದ ಅರಣ್ಯಕ್ಕೆ ಸಂಬಂಧಪಟ್ಟ ಉದ್ಯೋಗಗಳು.

೨ ಜೀವನ ನಿರ್ವಾಹಕ್ಕೆ ಒಕ್ಕಲತನ ಮತ್ತು ನೇಕಾರಿಕೆ ಉದ್ಯೋಗಗಳು ಎಷ್ಟು ಅವಶ್ಯವಾಗಿ ಬೇಕಾಗುವವೊ ಅಷ್ಟು ಈ ಉದ್ಯೋಗಗಳು ಬೇಕಾಗ ಲಿಕ್ಕಿಲ್ಲ. ಆದರೂ ಇಂದಿನ ಸಾಮಾಜಿಕ ಜೀವನಕ್ಕೆ ಇವು ಬೇಕಾಗುವವು. ಇವನ್ನು ತುಚ್ಛೀಕರಿಸಲು ಬರುವಂತಿಲ್ಲ.

೩ ಈ ಉದ್ಯೋಗಗಳನ್ನು ಮಾಡಲು ಬಹಳ ಜನರು ಬೇಕಾಗುವುದಿಲ್ಲ; ಆದರೂ ಉದ್ಯೋಗಗಳಿಂದ ಉತ್ಪನ್ನವಾದ ಪದಾರ್ಥಗಳು ಸರ್ವರಿಗೂ ಬೇಕಾ ದವುಗಳು. ಈ ಪದಾರ್ಥಗಳು ಉಪಭೋಗಿಸಲು ಯೋಗ್ಯವಿರುವದರಿಂದ ಈ ಉದ್ಯೋಗಗಳಲ್ಲಿ ಜನತೆಯ ಸ್ವಾರ್ಥವು ಅಡಕವಾಗಿದೆ.

೪ ಈ ಉದ್ಯೋಗಗಳು ದೇಶದ ಪ್ರತಿಯೊಂದು ಭಾಗದಲ್ಲಿ ನಡೆಯುವು ದಿಲ್ಲ, ಅಲ್ಲಲ್ಲಿ ಮಾತ್ರ ನಡೆಯುವವು.

೫ ಇವುಗಳಲ್ಲಿನ ಮೀನ ಹಿಡಿಯುವ ಮತ್ತು ಉಪ್ಪು ಮಾಡುವ ಉದ್ಯೋಗಗಳು ಒಕ್ಕಲತನ ಮತ್ತು ನೂಲುವ ಉದ್ಯೋಗಗಳ ತರಗತಿಗೆ ಸೇರುವವು. ಒಕ್ಕಲತನ ಮತ್ತು ನೂಲುವ ಉದ್ಯೋಗದ ವಿಷಯವಾಗಿ ಆರ್ಥಿಕ ನೀತಿಯು ಯಾವ ರೀತಿಯಾಗಿರುವದೊ ಅದೇ ರೀತಿಯಾಗಿ ಇವುಗಳ ವಿಷಯವಾಗಿಯೂ ಇರತಕ್ಕದ್ದು. ಯಾವ ರೀತಿ ನೂಲುವದು ಪ್ರತಿಯೊಬ್ಬ ಒಕ್ಕಲಿಗನ ಹಕ್ಕು ಇರುವುದೊ ಅದೆ ರೀತಿ ಮೀನ ಹಿಡಿಯುವದು ಸಮುದ್ರದ ದಂಡೆಯ ಮೇಲಿರುವವನ ಹಕ್ಕು ಇರತಕ್ಕದ್ದು.

೬ ಇನ್ನು ಮೇಲೆ ಹೇಳಿದ ವಿಶೇಷ ಉದ್ಯೋಗಗಳಿಗಾಗಿ ಬಹಳ ಬಂಡ ವಾಳ, ಒಲವು, ಕೌಶಲ್ಯ ಮುಂತಾದವು ಬೇಕು. ಈ ಉದ್ಯೋಗಗಳು ಸ್ವಂತ ಸಾಹಸದಿಂದಲೂ ಅಥವಾ ಸರಕಾರದವರಿಂದಲೂ ನಡೆಯಬಹುದು. ಕೆಳಗೆ ಕಾಣಿಸಿದಂತೆ ಈ ಉದ್ಯೋಗಗಳ ಮೇಲೆ ಸರಕಾರದ ನಿರ್ಬಂಧಗಳು ಇರತಕ್ಕದ್ದು :

(ಕ) ಇವುಗಳಿಂದ ಹುಟ್ಟುವ ಪದಾರ್ಥಗಳ ಉಪಭೋಗವು ಪ್ರಜರಿಗೆ ಅತ್ಯಂತ ಕಡಿಮೆ ಬೆಲೆಯಲ್ಲಿ ದೊರೆಯತಕ್ಕದ್ದು.

(ಖ) ಈ ಪದಾರ್ಥಗಳು ಚೆನ್ನಾಗಿ ಮಾಡಲ್ಪಟ್ಟವೂ ಬಹು ದಿನ ಬಾಳುವಂತಹವೂ ಇರತಕ್ಕದ್ದು.

(ಗ) ಈ ಉದ್ಯೋಗಗಳು ಸ್ವಂತ ಸಾಹಸದಿಂದ ನಡೆಯುತ್ತಿದ್ದರೆ ಅವುಗಳಿಂದ ಬರುವ ಲಾಭ ಮತ್ತು ಅವುಗಳ ಬೆಲೆಯ ಮೇಲೆ ಸರಕಾರದ ಅಂಕುಶವಿರತಕ್ಕದ್ದು.

(ಘ) ಇವುಗಳಲ್ಲಿ ದುಡಿಯುವ ಕೆಲಸಗಾರರ ಸುಖಸಂತೋಷದ ಕಡೆಗೆ ಸರಕಾರವು ಹೆಚ್ಚು ಗಮನಕೊಡತಕ್ಕದ್ದು.

(ಚ) ಇವುಗಳಲ್ಲಿ ಯಾವ ಉದ್ಯೋಗಗಳು ನಾನಾ ರೀತಿಯಾಗಿ ಚಿಕ್ಕ ಬಂಡವಾಳದಿಂದ ಮತ್ತು ಗೃಹೋದ್ಯೋಗಗಳಂತೆ ನಡೆಯುಬಲ್ಲವೊ ಅವುಗಳಿಗೆ ವಿಶಾಲ ಸ್ವರೂಪವನ್ನು ಕೊಡಬೇಕಾದ ಪ್ರಸಂಗದಲ್ಲಿ ಸರ್ಕಾರವು ಈ ವಿಷಯಗಳ ಕಡೆ ಹೆಚ್ಚು ಗಮನಕೊಡಬೇಕಾಗುವದು. ಇವುಗಳಿಗಾಗಿ ಬೇಕಾಗುವ ಕಾರ್ಖಾನೆಗಳು ಇವುಗಳ ಗೃಹೋದ್ಯೋಗಗಳನ್ನು ನಾಶಮಾಡುವಂಥವು ಇರಕೂಡದು. ಗೃಹೋದ್ಯೋಗಗಳಿಂದ ಹುಟ್ಟುವಂಥ ಪದಾರ್ಥಗಳನ್ನು ಮಾಡಬಹುದಾದ ವಿಶಾಲ ಕಾರ್ಖಾನೆಗಳಿಗೆ ಪ್ರತಿಬಂಧವು ಇರತಕ್ಕದ್ದು.

೭ ಬಟ್ಟೆಯ ಕಾರಖಾನೆಗಳು ಕೂಡ ನಡೆಯುತ್ತಿರುವ ವರೆಗೂ ಮೇಲಿನ ಕಟ್ಟುಗಳಿಗೆ ಒಳಪಟ್ಟಿರಬೇಕು,

## ೫ ಹಾನಿಕರ ಉದ್ಯೋಗಗಳು

೧ ಜನತೆಯ ನೀತಿಯನ್ನೂ ಆರೋಗ್ಯವನ್ನೂ ಕೆಡಿಸುವಂಥ ಸರಾಯಿ, ಅಫು, ಭಂಗಿ, ಗಾಂಜೀ, ತಂಬಾಕು, ಶಸ್ತ್ರ, ಮದ್ದು ಮುಂತಾದ ಉದ್ಯೋಗಗಳನ್ನು ಸರಕಾರವು ಸ್ವತಂತ್ರವಾಗಿ ಮಾಡಲು ಅಪ್ಪಣೆಯನ್ನು ಕೊಡಕೂಡದು, ಕೊಟ್ಟರೂ ತನ್ನ ಕಟ್ಟಪ್ಪಣೆಯ ಮೇರೆಗೆ ಮಾಡಗೊಡತಕ್ಕದ್ದು.

೨ ಈ ಉದ್ಯೋಗಗಳನ್ನು ನಡೆಸುವಾಗ ಸರಕಾರದ ಧೋರಣೆಯು ಇವುಗಳಿಂದಾಗುವ ಉತ್ಪನ್ನದ ಕಡೆ ಇರತಕ್ಕದ್ದಲ್ಲ. ಆರೋಗ್ಯ ಮುಂತಾದವುಗಳ ದೃಷ್ಟಿಯಿಂದ ಇಂಥ ಪದಾರ್ಥಗಳು ಎಷ್ಟು ಅವಶ್ಯವಿರುವವೊ ಅಷ್ಟೇ

ಪ್ರಮಾಣದಲ್ಲಿ ಅವನ್ನು ಉತ್ಪನ್ನ ಮಾಡಿಸುವ ಮತ್ತು ಜನತೆಗೆ ಮುಟ್ಟಿಸುವ ಧೋರಣೆಯನ್ನು ಇಟ್ಟುಕೊಂಡಿರತಕ್ಕದ್ದು.

೩ ಇಂಥ ಪದಾರ್ಥಗಳ ಅಂತರರಾಷ್ಟ್ರೀಯ ವ್ಯಾಪಾರವನ್ನು ಪರದೇಶೀ ರಾಜ್ಯಗಳ ಇಚ್ಛೆಯಂತೆಯೆ ಮಾಡಗೊಡತಕ್ಕದ್ದು.

## ೬ ಉಪಯುಕ್ತ ಉದ್ಯೋಗಗಳು

೧ ಸಾಮಾಜಿಕ ಜೀವನಕ್ಕೆ ಈ ಉದ್ಯೋಗಗಳನ್ನಲ್ಲದೆ ಇನ್ನೂ ಎಷ್ಟೋ ಉಪಯೋಗ ಬೀಳುವಂಥ ಕೆಲಸಗಳನ್ನು ಮಾಡುವವರೂ ಬೇಕಾಗುವರು. ಉದಾ: ಶಿಕ್ಷಕರು, ಸೈನಿಕರು, ವಕೀಲರು, ನ್ಯಾಯಾಧೀಶರು, ಅಧಿಕಾರಿಗಳು, ಡಾಕ್ಟರರು, ಅಂಗಡಿಕಾರರು, ಸ್ವಚ್ಛತೆ ಇಡುವವರು ( ಭಂಗೀ ಮೊದಲಾದ ವರು), ಕಾರಕೂನರು ಇತ್ಯಾದಿ.

೨ ಈ ಉದ್ಯೋಗಸ್ಥರು ಯಾವ ಉಪಭೋಗ್ಯ ವಸ್ತುಗಳನ್ನು ಪ್ರತ್ಯಕ್ಷ ವಾಗಿ ಉತ್ಪನ್ನ ಮಾಡದಿದ್ದರೂ ಅಪ್ರತ್ಯಕ್ಷವಾಗಿ ಪದಾರ್ಥಗಳನ್ನು ತಯಾರಿ ಸುವದಕ್ಕೂ ಭೋಗ್ಯ ಹಾಗೂ ಅನರ್ಥ ಮಾಡುವ ಪದಾರ್ಥಗಳ ಯೋಗ್ಯ ವ್ಯವಸ್ಥೆ ಮಾಡುವದಕ್ಕೂ ಬೇಕಾಗುವರು.

೩ ಈ ಉದ್ಯೋಗಸ್ಥರನ್ನು ಸಲಹುವದಕ್ಕೆ ಸಮಾಜವು ಏನು ವೆಚ್ಚ ಮಾಡುವದೊ ಅದು ವ್ಯವಸ್ಥಾವೆಚ್ಚವೆನಿಸುವದು. ಆದ್ದರಿಂದ ಈ ಉದ್ಯೋಗ ಸ್ಥರ ಸಂಖ್ಯೆಯು ಮತ್ತು ಅವರಿಗೋಸ್ಕರ ಮಾಡುವ ವ್ಯವಸ್ಥಾವೆಚ್ಚವು ಜನ ಸಂಖ್ಯೆಗೆ ಮತ್ತು ಜನರ ಸಮೃದ್ಧಿಗೆ ಅನುಗುಣವಾಗಿರಬೇಕು, ಅದು ಮಿತಿ ಯನ್ನು ಮೀರಕೂಡದು.

೪ ಈ ಉದ್ಯೋಗಗಳು ಜನಸೇವಾವೃತ್ತಿಯಿಂದ ನಡೆಯಬೇಕಲ್ಲದೆ ಗಳಿಸಬೇಕು, ಶ್ರೀಮಂತನಾಗಬೇಕು ಎಂಬ ವೃತ್ತಿಯಿಂದ ಮಾಡಲ್ಪಡ ಬಾರದು. ಈ ಉದ್ಯೋಗಗಳನ್ನು ಮಾಡುವವರಿಗೆ, ಸಮಾಜದ ಸ್ಥಿತಿ ಮತ್ತು ಸಮೃದ್ಧಿಯ ಮರ್ಯಾದೆಯಲ್ಲಿಯೆ ಇದ್ದುಕೊಂಡು ಜೀವನನಿರ್ವಾಹವನ್ನು ಸಾಗಿಸಲು ಬರುವಷ್ಟು ಸ್ಥಿರವಾದ ಸಂಬಳವನ್ನು ಕೊಟ್ಟು, ಅವರನ್ನು ನಿಶ್ಚಿಂತ ಮಾಡಬೇಕು; ಈ ಉದ್ಯೋಗಸ್ಥರು ಇಷ್ಟರಿಂದಲೆ ಸಂತುಷ್ಟರಾಗಿರತಕ್ಕದ್ದು ಮತ್ತು ಈ ರೀತಿ ದೊರೆತ ಪರಿಶ್ರಮದ ಫಲವನ್ನು ಪಡೆದ ಮೇಲೆ ಗಳಿಸುವ

ಇನ್ನಾವ ಉದ್ಯೋಗವನ್ನು ಮಾಡದೆ ತಮ್ಮಲ್ಲಿದ್ದ ಜ್ಞಾನದ ಲಾಭವನ್ನು ಆದಷ್ಟು ಹೆಚ್ಚಾಗಿ ಜನರಿಗೆ ಮಾಡಿಕೊಡತಕ್ಕದ್ದು.

೫ ಈ ರೀತಿ ಒಂದು ಮೇರೆಯಲ್ಲಿದ್ದುಕೊಂಡು ಈ ಉದ್ಯೋಗಗಳು ನಡೆಸಲ್ಪಟ್ಟರೆ ಅವುಗಳಿಂದ ಸಮಾಜದ ಸರ್ವೋದಯಕ್ಕೆ ಸಹಾಯವು ಸಿಕ್ಕು ವದು ಮತ್ತು ಭೋಗ್ಯವಲ್ಲದ ಧನಲಾಲನೆಯೂ ಧನಾರ್ಜನೆಗಾಗಿ ಮಾಡಲ್ಪ ಡುವ ಕುಟಿಲ ಯುಕ್ತಿಗಳೂ ಇಲ್ಲದಂತಾಗುವವು.

೬ ಧನವನ್ನು ಸಂಗ್ರಹಿಸುವ ಇಚ್ಛೆ ಇರುವವರಿಗೆ ಭೂಮಿ, ಮನೆ, ಆಭರಣಗಳು ಬೇಕೆನ್ನುವವರಿಗೆ, ಸಂತತಿ ಹೆಚ್ಚಿಸಬೇಕೆನ್ನುವವರಿಗೆ ಉದ್ಯೋಗ ಗಳೆ ಅವರ ಮನಸ್ಸನ್ನೆಳೆಯುವ ಆಕರ್ಷಣ ದ್ವಾರಗಳಾಗಿರಬೇಕು; ಅವರಿಗೆ ಉದ್ಯೋಗಗಳಲ್ಲಿ ಅನುಕೂಲತೆಗಳು ಆದಷ್ಟು ಹೆಚ್ಚು ಇರತಕ್ಕದ್ದು. ಆದರೆ ಈ ಪ್ರಕರಣದಲ್ಲಿ ವರ್ಣಿಸಲ್ಪಟ್ಟ ಉದ್ಯೋಗಗಳಲ್ಲಿ ಉದ್ಯೋಗಿಗಳಿಗೆ ಇಷ್ಟೇ ಸಂಪಾದನೆಯಾಗಬೇಕೆಂಬ ನಿರ್ಬಂಧವಿರಬೇಕು.

೭ ಯಾರು ಮಿತಿಯನ್ನು ಮೀರದೆ ಸ್ಥಿರವಾದ ಮತ್ತು ನಿಶ್ಚಿಂತ ನಿರ್ವಾಹ ವನ್ನು ದೊರಕಿಸಬೇಕೆನ್ನುವರೊ ಮತ್ತು ಜನಸೇವೆಯನ್ನು ಮಾಡಬೇಕೆನ್ನು ವರೊ ಅವರಿಗಾಗಿಯೆ ಈ ಉದ್ಯೋಗಗಳ ಮಾರ್ಗವು ತೆರೆದಿರಬೇಕು. ಹೀಗೆ ಮಾಡುವದರಿಂದ ಈ ಉದ್ಯೋಗಗಳಲ್ಲಿ ಪ್ರವೇಶ ಮಾಡುವದಕ್ಕಾಗಿ ಬೇಕಾ ಗುವ ಜ್ಞಾನವೂ ಚರಿತ್ರಬಲದ ಉಚ್ಚ ಧೋರಣೆಯೂ ಉಂಟಾಗಬಲ್ಲದು.

## ೭ ಲಲಿತ-ಕಲೆಗಳು

೧ ಸಂಗೀತ, ಕಥೆ, ವಾರ್ತೆ, ಚಿತ್ರಕಲೆ, ನೃತ್ಯ, ನಾಟಕ, ಸಿನೇಮಾ ಮುಂತಾದ ಲಲಿತಕಲೆಗಳು ಮೇರೆಯನ್ನು ಮೀರದಿದ್ದರೆ ಅವು ಜನರ ನಿರ್ದೋಷ ಮನೋರಂಜನೆಗೂ ಜ್ಞಾನಪ್ರಾಪ್ತಿಗೂ ಭಾವನೆಯ ಬೆಳವಣಿ ಗೆಗೂ ಸಾಧನಗಳಾಗುವವು. ಸೀಮೆಯನ್ನು ಉಲ್ಲಂಘಿಸಿದರೆ ಸರಾಯಿ, ಹೆಂಡ, ಅಫೀಮು ಮುಂತಾದವುಗಳಂತೆ ಇವಾದರೂ ಹಾನಿಕರ ವ್ಯಸನ ಗಳಾಗುವವು.

೨ ಸಾಮಾನ್ಯವಾಗಿ ಇಂಥ ಕಲೆಗಳನ್ನು ಉಪಜೀವನದ ಉದ್ಯೋಗ ಗಳನ್ನಾಗಿ ಯಾರೂ ಮಾಡಿಕೊಳ್ಳತಕ್ಕದ್ದಲ್ಲ. ಪ್ರತಿಯೊಬ್ಬ ಮನುಷ್ಯನು ತನ್ನ ಉಪಜೀವನದ ಉದ್ಯೋಗವನ್ನು ಮಾಡಿದ ಬಳಿಕ ಅವನಿಗೆ ಯಾವ ದೊಂದು ಕಲೆಯಲ್ಲಿ ರುಚಿಯು ಹುಟ್ಟುವಂತೆ ಶಿಕ್ಷಣದ ಧೋರಣವಿರಬೇಕು.

೩ ಜನರ ಮನೋರಂಜನೆಗೋಸ್ಕರ ಇಂಥ ಕಲೆಗಳ ಪ್ರದರ್ಶನವನ್ನು ಇಲ್ಲವೆ ಕಚೇರಿಯನ್ನು ಜನರು ಸ್ವತಃ ತಮ್ಮ ಉತ್ಸಾಹದಿಂದಲೆ ಮಂಡಳಗಳನ್ನು ರಚಿಸಿ ಅವುಗಳ ಮುಖಾಂತರ ಜರಗಿಸಿಕೊಳ್ಳತಕ್ಕದ್ದು.

೪ ಇಂಥ ಕಲೆಗಳ ರುಚಿಯು ಮೇರೆಯನ್ನು ಮೀರಿ ಹೋಗದಂತೆ, ಅನೀತಿಯ ಕಡೆಗೆ ಒಲಿಯದಂತೆ ಇವು ಹಾನಿಕರವಾಗದಂತೆ ಪ್ರದರ್ಶನ, ಕಚೇರಿ ಮುಂತಾದವುಗಳ ಮೇಲೆ ಕಡುತರವಾದ ದೃಷ್ಟಿಯೂ ಮೇಲ್ವಿಚಾರಣೆಯೂ ಇರತಕ್ಕದ್ದು.

೫ ಮೇಲೆ ಈ ಕಲೆಗಳ ಬಗ್ಗೆ ಸಾಮಾನ್ಯ ರೀತಿನೀತಿಯನ್ನು ತೋರಿಸಿದ್ದಾಯಿತು. ಇಂತಹ ಕಲೆಗಳಿಂದ ನಿರ್ವಾಹ ಸಾಗಿಸಿಕೊಳ್ಳಲು ಕಟ್ಟು ಮಾಡಿದರೆ ಅದರಿಂದ ಹಿತವಾಗದಿರುವ ಸಂಭವವುಂಟು. ಅಲ್ಲದೆ ಆ ಕಟ್ಟು ವ್ಯವಹಾರದಲ್ಲಿ ಉಳಿಯುವದು ಕಠಿಣವು. ಆದ್ದರಿಂದ ಇಂಥ ಕಲೆಗಳ ನಿರ್ದೋಷ ಜ್ಞಾನಪ್ರದ ಮತ್ತು ಸದ್ಭಾವಪೋಷಕ ಉಪಭೋಗವು ಜನರಿಗೆ ದೊರೆಯುವಂತೆ ವ್ಯವಸ್ಥೆ ಮಾಡುವದು ಮತ್ತು ಹಿಂದಿನ ಪ್ರಕರಣದಲ್ಲಿ ಉಪಯುಕ್ತ ಉದ್ಯೋಗಗಳ ವಿಷಯದಲ್ಲಿ ಸೂಚಿಸಿದ ಪ್ರಕಾರ ಸಮೃದ್ಧಿಯ ಮೇರೆಯನ್ನಿಟ್ಟುಕೊಂಡು ಈ ಕಲೆಗಳ ಉಪಾಸನೆ ಮಾಡುವವರಿಗೆ ನಿಶ್ಚಿತ ಸಂಬಳ ಕೊಡುವದು ಮತ್ತು ಈ ಕಲೆಗಳನ್ನು ಅಭ್ಯಾಸ ಮಾಡುವದಕ್ಕಾಗಿ ಸಚ್ಚರಿತ್ರ ಮನುಷ್ಯರನ್ನು ದೊರಕಿಸುವದು ಗ್ರಾಮಪಂಚಾತಿಯಗಳ ಒಂದು ಕರ್ತ್ತವ್ಯವಾಗತಕ್ಕದ್ದು.

೬ ಸ್ವತಂತ್ರವಾಗಿ ಈ ಉದ್ಯೋಗಗಳನ್ನು ಮಾಡಬೇಕೆನ್ನುವವರ ಮೇಲೆ ನೀತಿಯ ನಿರ್ಬಂಧನೆ ಇರಬೇಕು ಅಲ್ಲದೆ ಅನುಮತಿ, ವಿಶಿಷ್ಟ ಕರ ಮುಂತಾದ ಬಂಧನಗಳೂ ಇರತಕ್ಕದ್ದು.

೭ ಇಂಥ ಕಲೆಗಳ ಯೋಗ್ಯ ಪೋಷಣೆಗಾಗಿ ಮತ್ತು ವೃದ್ಧಿಗಾಗಿ ಸರಕಾರವು ಅನುಕೂಲತೆಗಳನ್ನು ಮತ್ತು ಯೋಗ್ಯ ಕಲಾವಿದರಿಗೆ ಉತ್ತೇಜನವನ್ನು ಒದಗಿಸಿಕೊಡಬಹುದು. ಇದರಲ್ಲಿ ತಾರತಮ್ಯದ ಭಂಗವಾಗದಿದ್ದರೆ ಈ ರೀತಿ ಮಾಡುವದು ಯೋಗ್ಯವೆನಿಸುವದು.

೮ ತನ್ನ ಉದ್ಯೋಗದಲ್ಲಿ ಕಲಾಪ್ರವೃತ್ತಿಯನ್ನು ತೋರಿಸುವ ಪ್ರತಿಯೊಬ್ಬ ಶಿಲ್ಪಿಯೂ ಉತ್ತೇಜನಕ್ಕೆ ಪಾತ್ರನು. ಈ ದೃಷ್ಟಿಯನ್ನಿಟ್ಟುಕೊಂಡು ಕಲೆಯ ಪೋಷಣೆಯ ಕಡೆಗೆ ಸರಕಾರವು ಮೊದಲು ಗಮನಕೊಡುವದು ಉಚಿತವಾದದ್ದು.

## ಅಷ್ಟಮ ಖಂಡ

# ಗೋಪಾಲನೆ

## ೧ ಧಾರ್ಮಿಕ ದೃಷ್ಟಿ

೧ ಹಿಂದೂ ಧರ್ಮದಲ್ಲಿ ಗೋಪಾಲನೆಗೆ ಧಾರ್ಮಿಕ ಮಹತ್ವವು ಬಂದಿದೆ ಮತ್ತು ಗೋವಧೆಯು ಮಹಾಪಾತಕವೆನಿಸಿದೆ ಹಾಗೂ ಅರಸರ ಮತ್ತು ವೈಶ್ಯರ ಮೇಲೆಯೆ ಗೋಪಾಲನೆಯ ಭಾರವು ಹೊರಿಸಲ್ಪಟ್ಟಿದೆ. ಆದ್ದರಿಂದ ಈ ಕಾರ್ಯಕ್ಕಾಗಿ ಜನರಿಂದ ಲಕ್ಷಾಂತರ ರೂಪಾಯಿಗಳು ದಾನವೆಂದು ದೊರೆಯುತ್ತವೆ. ಆದರೂ ಕಾರ್ಯವಾಹಕರಲ್ಲಿ ಯೋಗ್ಯದೃಷ್ಟಿ ಇಲ್ಲದ್ದರಿಂದ ಗೋಭಕ್ಷಕ ದೇಶಗಳಿಗಿಂತಲೂ ಹಿಂದೂ ದೇಶದಲ್ಲಿ ದನಗಳ ಸ್ಥಿತಿಯು ಕರುಣಾಜನಕವಾಗಿದೆ.

೨ ಗೋಪಾಲನೆಯ ವಿಷಯದಲ್ಲಿರುವ ನಮ್ಮ ಧಾರ್ಮಿಕ ದೃಷ್ಟಿಯಲ್ಲಿ ಕೆಳಗಿನಂತೆ ಮಾರ್ಪಾಡು ಹಾಗೂ ವಿಕಾಸವು ಆಗುವದು ಅವಶ್ಯವಿದೆ.

(ಕ) ಅಂಗಹೀನ ಮತ್ತು ನಿರ್ಬಲ ದನಗಳನ್ನು ಪಾಲಿಸುವದಷ್ಟೆ ಗೋಪಾಲನೆಯ ಕಾರ್ಯಕ್ಷೇತ್ರವಲ್ಲ. ಆಕಳಿನ ಮತ್ತು ಎತ್ತಿನ ಜಾತಿಯಲ್ಲಿ ಸುಧಾರಣೆಯನ್ನು ಮಾಡಬೇಕು ಮತ್ತು ಆಕಳುಗಳು ಹೆಚ್ಚು ಸತ್ವವುಳ್ಳವುಗಳೂ ಹಾಲು ಕರೆಯುವಂಥವೂ ಆಗುವಂತೆ ಮಾಡಬೇಕು. ಎತ್ತಿನ ಜಾತಿಯಲ್ಲಿಯಂತೂ ಚೆನ್ನಾಗಿ ಸುಧಾರಣೆ ಆಗಬೇಕು. ಇವು ಕೂಡ ಗೋಪಾಲನಧರ್ಮದ ಮುಖ್ಯ ಅಂಗವಾಗಿರುವವು.

(ಖ) ಆದ್ದರಿಂದ ಪಾಂಜರಪೋಳಗಳು ಜನರಿಗೆ ವಸ್ತುಪಾಠವನ್ನು ಕಲಿಸುವಂತಹ ಆದರ್ಶ ಗೋಶಾಲೆಗಳಾಗಿರತಕ್ಕದ್ದು. ದನಗಳ ಗೋದಲಿ, ಹುಲ್ಲು ಹಾಕುವ, ದಾಣಿ ಕಟ್ಟುವ ಪದ್ಧತಿ, ಇವುಗಳಿಂದಾಗುವ ಪರಿಣಾಮವನ್ನು ತೋರಿಸುವ ಪತ್ರಿಕೆ, ಇವೆಲ್ಲವುಗಳಲ್ಲಿ ಅಚ್ಚುಕಟ್ಟೂ ಅಭ್ಯಾಸ ದೃಷ್ಟಿಯೂ ದೃಗ್ಗೋಚರವಾಗಬೇಕು.

(ಗ) ಎತ್ತಿನ ಸಂತತಿಯನ್ನು ಸುಧಾರಿಸುವದಕ್ಕಾಗಿ ಗ್ರಾಮದ ಜನ

ಗಳಿಗೆ ಲಾಭಕಾರಿಯಾಗುವಂತಹ ರೀತಿಯನ್ನೆ ಪಾಂಜರಪೋಳದವರು ಉಪಯೋಗಿಸಿ ಹೋರಿಗಳನ್ನು ಪಾಲಿಸತಕ್ಕದ್ದು.

(ಘ) ಪಾಂಜರಪೋಳಗಳಲ್ಲಿ ಚರ್ಮಾಲಯ ವಿಭಾಗವು ಕೂಡ ಇರತಕ್ಕದ್ದು; ಸತ್ತ ದನಗಳ ಚರ್ಮದ ಉದ್ಯೋಗವನ್ನು ತಿರಸ್ಕಾರದ ದೃಷ್ಟಿಯಿಂದ ನೋಡದೆ ಕರ್ತವ್ಯದ ದೃಷ್ಟಿಯಿಂದ ಮಾಡತಕ್ಕದ್ದು. ತನ್ನ ಸತ್ತ ದನಗಳ ಚರ್ಮವನ್ನು, ಎಲುಬು ಮಾಂಸಗಳನ್ನು ಉಪಯೋಗಿಸಲು ಕೊಡದ ಒಡೆಯನು ದನಗಳ ಕೊಲೆಗೆ ಉತ್ತೇಜನವನ್ನೀಯುತ್ತಾನೆಂದು ತಿಳಿಯತಕ್ಕದ್ದು ಮತ್ತು ಜೀವದಯಾ ಸಂಘದವರು ಸತ್ತ ದನಗಳ ಎಲುಬು ಮಾಂಸ ಮತ್ತು ಚರ್ಮವನ್ನೆ ಉಪಯೋಗಿಸುತ್ತೇವೆಂದು ಹಟಹಿಡಿಯತಕ್ಕದ್ದು. *

(ಚ) ಜೀವಂತ ದನಗಳಿಗಿಂತಲೂ ಸತ್ತ ದನಗಳ ಬೆಲೆಯು ಹೆಚ್ಚೆಂದು ತಿಳಿಯುವದು ಧಾರ್ಮಿಕ ದೃಷ್ಟಿಯಿಂದ ಭಯಾನಕವಾಗಿರುವದು. ಆದಕಾರಣ ಜೀವಂತ ದನಗಳ ಬೆಲೆಯ ಮಹತ್ವವನ್ನು ಹೆಚ್ಚಿಸಲು ಯತ್ನಿಸುವದು ಧಾರ್ಮಿಕ ಕರ್ತವ್ಯವೆಂದು ತಿಳಿಯತಕ್ಕದ್ದು.

(ಛ) ಹೋರಿಗಳ ಕಸೀ ಮಾಡುವದು ಅಗತ್ಯವೆಂದು ತಿಳಿದು, ನೋವಾಗದ ಶಾಸ್ತ್ರೀಯ ಪದ್ಧತಿಯನ್ನು ಚೆನ್ನಾಗಿ ಅರಿತುಕೊಂಡು ಆ ಮೇಲೆ ಪಾಂಜರಪೋಳಿನವರು ಕಸೀ ಮಾಡುವ ಯೋಜನೆಯನ್ನು ಕೈಕೊಳ್ಳತಕ್ಕದ್ದು.

(ಜ) ಪ್ರಾಣಿಯು ಅತ್ಯಂತ ಕಷ್ಟದಲ್ಲಿ ತೊಳಲಾಡುತ್ತಿರುವಾಗ ಅಂಗಹೀನವಾಗಿಯಾದರೂ ಬದುಕುವ ಆಶೆಯು ಇಲ್ಲದಿದ್ದಲ್ಲಿ ಮತ್ತು ಅದಕ್ಕೆ ವೇದನೆಯೆ ಹೆಚ್ಚಾಗುತ್ತ ಹೋಗುವಾಗ ಅದರ ಇಹಲೋಕದ ಯಾತ್ರೆಯನ್ನು ಮುಗಿಸಲು ನೋವಾಗದ ಉಪಾಯವನ್ನು ಕೈಕೊಳ್ಳುವದು ದಯಾಧರ್ಮವೆಂದು ಒಪ್ಪತಕ್ಕದ್ದು.

## ೨ ಅನ್ಯಪ್ರಾಣಿಗಳ ಪಾಲನೆ

೧ ಗೋ ಶಬ್ದದಲ್ಲಿ ಪ್ರಾಣಿಮಾತ್ರವೆಲ್ಲವೊ ಅಡಕವಾಗಿರುವದು ನಿಜವು.

---

* ಎಲುಬು ಮಾಂಸಗಳ ಉಪಯೋಗ ಮಾಡಬೇಕೆಂದು ಎಂದಾಕ್ಷಣಕ್ಕೆ ತಿನ್ನುವದಕ್ಕೆಂದು ಯಾರೂ ಅರ್ಥಮಾಡಕೂಡದು. ಅವುಗಳಿಂದ ಗೊಬ್ಬರ ಮತ್ತು ಇತರ ಉಪಯುಕ್ತ ವಸ್ತುಗಳನ್ನು ಮಾಡಿಕೊಳ್ಳತಕ್ಕದ್ದು ಎಂಬದನ್ನು ಸೂಚಿಸಲು ಇಚ್ಛಿಸುತ್ತೇನೆ.

ಅಹಿಂಸೆಯ ದೃಷ್ಟಿಯಿಂದ ವ್ಯವಹಾರದಲ್ಲಿ ಅದನ್ನು ಸ್ವಲ್ಪ ವಿವೇಕತನದಿಂದ ಉಪಯೋಗಿಸುವದು ಅವಶ್ಯವಾದದ್ದು. ವಿವೇಕವಿಲ್ಲದೆ ಮಾಡಿದ ಪ್ರಾಣಿಗಳ ಪಾಲನೆಪೋಷಣೆಯ ಪರಿಣಾಮವು ಹಿಂಸೆಗೆ ಉತ್ತೇಜನವನ್ನೀಯುತ್ತದೆ.

೨ ಈ ರೀತಿ ವಿವೇಕವಿಲ್ಲದ್ದರಿಂದ ಎಮ್ಮೆಯ ಹಾಲಿನ ಮತ್ತು ತುಪ್ಪದ ಉಪಯೋಗವು ಆಕಳು ಮತ್ತು ಎಮ್ಮೆಯ ಹಿಂಸೆಯನ್ನು ಹೆಚ್ಚಿಸಿಬಿಟ್ಟಿದೆ. ಇದಕ್ಕೆ ಕಾರಣಗಳು ಇಂತಿವೆ :

(ಕ) ಎಮ್ಮೆಯು ಜವಳು ಮತ್ತು ತಂಪು ಪ್ರದೇಶದಲ್ಲಿರತಕ್ಕ ಪ್ರಾಣಿಯು. ಆದ್ದರಿಂದ ಅದನ್ನು ಉಷ್ಣವಾದ ಮತ್ತು ಒಣ ಪ್ರದೇಶದಲ್ಲಿ ಒಯ್ದಿಟ್ಟುಕೊಂಡರೆ ಅದರ ಮೇಲೆ ಕ್ರೂರತನ ಮಾಡಿದಂತಾಗುತ್ತದೆ.

(ಖ) ಕೋಣದ ಉಪಯೋಗವು ಆಗುತ್ತಿಲ್ಲವಾದ್ದರಿಂದ ಅದರ ಕೊಲೆಯಾಗುತ್ತಿದೆ.

(ಗ) ಹೋರಿಗಳ ಸಲುವಾಗಿ ಆಕಳ ಪಾಲನೆಯೂ ಹಾಲಿನ ಸಲುವಾಗಿ ಎಮ್ಮೆಯ ಪಾಲನೆಯೂ ಆಗುತ್ತಿದೆ. ಇದರಿಂದ ಎಮ್ಮೆಯ ಪಾಲನೆಯಿಂದ ಆಗುವಷ್ಟು ಲಾಭವು ಆಕಳ ಪಾಲನೆಯಿಂದ ಆಗುವದಿಲ್ಲ. ಆದ್ದರಿಂದ ಜನರು ಆಕಳು ಹೆಚ್ಚಿಗೆ ಹಾಲು ಕೊಡುವಂತೆ ಮಾಡಲು ಪ್ರಯತ್ನಿಸುವದಿಲ್ಲ. ಇದರಿಂದ ಅದರ ಕೊಲೆಗೆ ಉತ್ತೇಜನವು ದೊರೆಯುತ್ತದೆ.

೩ ಆದ್ದರಿಂದ ಎಮ್ಮೆಯ ಹಾಲು-ಬೆಣ್ಣೆಯನ್ನು ಬಿಟ್ಟು ಎಮ್ಮೆಯ ಪಾಲನೆಯನ್ನು ನಿಲ್ಲಿಸುವದು ಯೋಗ್ಯವಾದದ್ದು. ಇದರ ಅರ್ಥವು, ಎಮ್ಮೆಯನ್ನು ಕೊಲ್ಲಿಸಬೇಕೆಂದಲ್ಲ. ಆದರೆ ಅದರ ಬೆಳವಣಿಗೆಗೆ ಉತ್ತೇಜನ ಕೊಡಲಾಗದು.

೪ ಇದೇ ರೀತಿ ವಿಚಾರ ಮಾಡಲು ಬೀದಿಯಲ್ಲಿ ಅಲೆದಾಡುವ ನಾಯಿಗಳಿಗೆ ಆಹಾರ ಹಾಕುವದು ಧರ್ಮವೆನಿಸುವದಿಲ್ಲ. ನಾಯಿಯನ್ನು ಪ್ರೀತಿಸುವವರು ಅವನ್ನು ಸರಿಯಾಗಿ ಸಾಕಬೇಕು ಮತ್ತು ಅದರ ಸರ್ವ ವಿಧದ ಆರೈಕೆಯನ್ನು ಮಾಡಬೇಕು. ಆದರೆ ಇವುಗಳಿಗೆ ಆಹಾರವನ್ನು ಹಾಕಿ ಬೀದಿಯ ಮೇಲೆ ಅಲೆದಾಡಗೊಡುವದರಿಂದ ಅವುಗಳನ್ನು ಪೀಡಿಸಿದಂತಾಗುವದು ಮತ್ತು ಅವುಗಳ ಅಧೋಗತಿಯಾಗುವದು ಮತ್ತು ಅನ್ಯ ಪ್ರಜೆಗಳಿಗೆ ಅನನುಕೂಲತೆಯುಂಟಾಗುವದು. ಅಲ್ಲದೆ ಅಂಥ ನಾಯಿಗಳಿಗೆ ಹುಚ್ಚುಹಿಡಿಯುವ ಸಂಭವವೂ ಇರುತ್ತದೆ.

೫ ಕೋತಿ, ಪಾರಿವಾಳ, ಹುಳಗಳು ಮುಂತಾದ ಪ್ರಾಣಿಗಳಿಗೆ ಆಹಾರ ಹಾಕುವದೂ ಧರ್ಮವೆನಿಸುವದಿಲ್ಲ. ಯಾವ ಪ್ರಾಣಿಗಳ ಜೀವನವು ಮನುಷ್ಯನನ್ನು ಅವಲಂಬಿಸಿಕೊಂಡಿರುವದಿಲ್ಲವೊ ಮತ್ತು ಯಾವ ಪ್ರಾಣಿಗಳ ಉಪಯೋಗವೂ ಮನುಷ್ಯನಿಗೆ ಇರುವದಿಲ್ಲವೊ ಅಂಥ ಪ್ರಾಣಿಗಳನ್ನು ಸಾಕುವದು ಅವಿಚಾರವು. ಇಂಥ ಪ್ರಾಣಿಗಳನ್ನು ಸಾಕುವದರಿಂದ ತನಗೆ ಹೆಚ್ಚು ತೊಂದರೆಯುಂಟಾಗುವದಲ್ಲದೆ ಆ ಪ್ರಾಣಿಗಳ ಹಿಂಸೆಯೂ ಹೆಚ್ಚಾಗುವದು.

೬ ಪ್ರಾಣಿಗಳ ಅಹಿಂಸೆಯನ್ನು ಕುರಿತು ಜೈನರು ಮತ್ತು ವೈಷ್ಣವರು ಯಾವ ದೃಷ್ಟಿಯನ್ನಿಟ್ಟುಕೊಂಡಿದ್ದಾರೊ ಆ ದೃಷ್ಟಿಯನ್ನು ಇಟ್ಟುಕೊಳ್ಳದವರ ಕೈಯಿಂದ, ಇಂಥ ಪ್ರಾಣಿಗಳ ಉಪದ್ರವವನ್ನು ತಪ್ಪಿಸಿಕೊಳ್ಳುವದಕ್ಕಾಗಿ ಆಗಾಗ್ಗೆ ಇವುಗಳ ಕೊಲೆಯಾದರೆ ಅದರಲ್ಲಿ ಆಶ್ಚರ್ಯಕರವಾದ ಸಂಗತಿಯೇನೂ ಇರುವದಿಲ್ಲ. ಇಂಥ ಪ್ರಾಣಿಗಳಿಗೆ ಆಹಾರ ಹಾಕುವದು ಧರ್ಮವೆಂದು ತಿಳಿಯುವ ವರ್ಗವೆ ಇಂತಹ ಪ್ರಾಣಿಗಳ ವಧೆಗೆ ಹೊಣೆಯಾಗಿರುವದು; ಇದರಿಂದ ಆ ವರ್ಗದವರು ಕುಪಿತರಾದರೆ ಅದು ಯೋಗ್ಯವಾದುದಲ್ಲ.

## ೩ ಪ್ರಾಣಿಗಳ ಬಗ್ಗೆ ಕ್ರೂರತನ

೧ ಪ್ರಾಣಿಯನ್ನು ಒಂದೇ ಏಟಿನಿಂದ ಕೊಲ್ಲುವದಕ್ಕಿಂತ ಅದರೊಡನೆ ಕ್ರೂರತನದಿಂದ ವರ್ತಿಸುವದು ಕಡಿಮೆ ತರದ ಹಿಂಸೆಯಲ್ಲ. ಇಂತಹ ಹಿಂಸೆಯು ಹಿಂದೂ ಜನರಲ್ಲಿ ಚೆನ್ನಾಗಿ ಮನೆಮಾಡಿಕೊಂಡಿದೆ.

೨ ಫೂಂಕಾ ಎಂಬ ಕ್ರಿಯೆ, ಕಸಿಮಾಡಿಸುವದು, ಅರಹೊಟ್ಟೆ ಹಾಕುವದು, ಬಾರಕೋಲಿನಿಂದ ಹೊಡೆಯುವದು, ಮಿತಿಮೀರಿ ಭಾರಹೇರುವದು, ಬಾಲವನ್ನು ಮುರಿಯುವದು, ಆಹಾರಕ್ಕಾಗಿ ಕೊರಗಿಸುವದು, ಗಾಯವಾದ ಅಂಗಗಳ ಶುಶ್ರೂಷೆ ಮಾಡದಿರುವದು, ಮುಗದಾಣ ಹಾಕುವದು ಮುಂತಾದ ರೀತಿಗಳು ಅಮಾನುಷವೂ ಕ್ರೂರವೂ ಇರುವವು.

೩ ಇವುಗಳ ಪರಿಣಾಮವು ಭಯಾನಕವಾಗಿದೆ. ಹಿಂದುಸ್ತಾನದಲ್ಲಿ ಆಕಳು, ಎತ್ತು, ಎಮ್ಮೆ, ಕುದುರೆ, ಕತ್ತೆ, ಬೆಕ್ಕು, ನಾಯಿ ಮುಂತಾದ ಪ್ರಾಣಿಗಳು ಮೈಮೇಲೆ ಮುಳ್ಳುಬರುವಂಥ ಸ್ಥಿತಿಯಲ್ಲಿ ಉಪಜೀವಿಸುತ್ತಿವೆ.

## ೪ ಗೋವಧೆ

೧ ಹಿಂದೂ ಜನರ ಧಾರ್ಮಿಕ ದೃಷ್ಟಿಯನ್ನು ಸಂತೋಷಪಡಿಸುವದಕ್ಕಾಗಿ

ಮಾತ್ರವಲ್ಲ, ಆದರೆ ಹಿಂದುಸ್ತಾನದ ಆರ್ಥಿಕ ದೃಷ್ಟಿಯಿಂದಲೂ ಗೋವಧೆಗೆ ನಿರ್ಬಂಧವು ಇರತಕ್ಕದ್ದು.

೨ ಆದರೆ ಹೀಗಾಗದಿರುವ ವರೆಗೆ ಹಿಂದೂಗಳು ಧೈರ್ಯದಿಂದ ಇದ್ದು ಕೊಂಡು ತಿಳಿಹೇಳಿಕೆ ಮತ್ತು ಸೇವೆಯಿಂದ ಗೋವಧೆಯನ್ನು ನಿಲ್ಲಿಸಲು ಯತ್ನಿಸತಕ್ಕದ್ದು.

೩ ಗೋವಧೆಯನ್ನು ನಿಲ್ಲಿಸಲು ಮನುಷ್ಯ (ಮುಸಲ್ಮಾನ) ವಧೆಯನ್ನು ಮಾಡುವದು ಅಧರ್ಮವು.

೪ ಆಕಳ ಬಲಿಯನ್ನು ಕೊಡುವದು ಕರ್ತವ್ಯಕರ್ಮವಲ್ಲವೆಂದು ತಿಳಿದು ಕೊಂಡು ಮುಸಲ್ಮಾನರು ಆಕಳ ಬಲಿದಾನವನ್ನು ನಿಲ್ಲಿಸುವದು ಪರಮ ಸತ್ಕೃತ್ಯವೆಂದೆನಿಸುವದು. ಕನಿಷ್ಠಪಕ್ಷದಲ್ಲಿ ಹಿಂದೂಗಳ ಅಂತಃಕರಣಕ್ಕೆ ನೋವಾಗದಂತೆ ಅಂತರಂಗದಲ್ಲಿ ಇಂಥ ವಧೆಯನ್ನು ಮಾಡುವದು ಇದ ಕ್ಕಿಂತಲೂ ಕಡಿಮೆ ತರಗತಿಯ ಕೃತ್ಯವೆನಿಸುವದು.

೫ ಹಿಂದೂ ಜನರ ಅಂತಃಕರಣವು ನೋಯುವ ಹಾಗೆ ಬಹಿರಂಗದಲ್ಲಿ ಗೋವಧೆಯನ್ನು ಮಾಡುವವರು ಮತ್ತು ವಧ್ಯಗೋವನ್ನು ಮೆರೆಸುವವರು ಧರ್ಮಕಾರ್ಯವನ್ನು ಮಾಡುವದಿಲ್ಲ. ಇಂಥ ಕೃತ್ಯದ ಆಚರಣೆಗಳಿಗೆ ನಿರ್ಬಂಧ ಇರತಕ್ಕದ್ದು.

೬ ಯಾವದೊಂದು ಹಬ್ಬದ ದಿವಸ ಗೋ-ಬಲಿಯನ್ನು ಕೊಡುವ ಮುಸಲ್ಮಾನರಿಗಿಂತ ದಿನಾಲು ತಿನ್ನುವದಕ್ಕಾಗಿ ಗೋವಧೆಯನ್ನು ಮಾಡಿಸು ವಂಥ ಇಂಗ್ರೇಜರ ರಾಜ್ಯವು ಹಿಂದೂಗಳಿಗೆ ಹಾಗೂ ಹಿಂದುಸ್ತಾನಕ್ಕೆ ಹೆಚ್ಚಿನ ಅಪಕಾರವನ್ನು ಮಾಡುತ್ತದೆ.

## ೫ ಸತ್ತ ದನಗಳು

೧ ತಾವು ಪಾಲಿಸಿದ ದನಗಳು ತೀರಿಹೋದ ಬಳಿಕ ಅವುಗಳ ಎಲುಬು, ಮಾಂಸ, ಚರ್ಮಗಳನ್ನು ಉಪಯೋಗಿಸುವದರಲ್ಲಿ ಉದಾರತೆಯಿಲ್ಲವೆಂದು ಎಷ್ಟೋ ಜನಗಳ ಭಾವನೆಯಾಗಿದೆ. ಆದ್ದರಿಂದಲೆ ದನದ ಯಾವ ಅಂಗವೂ ಉಪಯೋಗಿಸಲ್ಪಡುತ್ತಿರುವದಿಲ್ಲ ಮತ್ತು ಮಾದಿಗರು ಇವುಗಳ ಉಪಯೋಗ ವನ್ನು ಸರಿಯಾಗಿ ಮಾಡಿಕೊಳ್ಳುತ್ತಿರುವದಿಲ್ಲ. ಮಾದಿಗರು ಸತ್ತ ದನಗಳ ಮಾಂಸವನ್ನು ತಿನ್ನುತ್ತಾರೆ. ಆದರೆ ಅವನ್ನು ದರದರ ಎಳೆಯುತ್ತ ಒಯ್ದು

ಚರ್ಮವನ್ನು ಅನುಪಯುಕ್ತ ಮಾಡಿಬಿಡುತ್ತಾರೆ, ಅಲ್ಲದೆ ಎಲುಬುಗಳನ್ನು ಮುರಿದು ಪುಡಿಪುಡಿ ಮಾಡಿಬಿಡುತ್ತಾರೆ.

೨ ಈ ಭಾವನೆಯನ್ನು ಬಿಟ್ಟುಬಿಡುವದು ಅವಶ್ಯ. ತಮ್ಮ ದನಗಳು ಜೀವಿಸಿರುವವರೆಗೆ ಅವನ್ನು ಸರಿಯಾಗಿ ರಕ್ಷಿಸತಕ್ಕದ್ದು ಮತ್ತು ಸತ್ತ ಬಳಿಕ ಅವನ್ನು ಮರ್ಯಾದೆಯಿಂದ ಹೊತ್ತುಕೊಂಡು ಹೋಗಿ ಯೋಗ್ಯ ಸ್ಥಳದಲ್ಲಿ ಕೊಯ್ಯಿಸತಕ್ಕದ್ದು. ದನಗಳು ಸತ್ತ ಮೇಲೂ ನಿರುಪಯೋಗಿಯಾಗುವದಿಲ್ಲವೆಂದು ತಿಳಿದುಕೊಂಡು ಅವು ಜೀವಿಸಿರುವಾಗ ಅವುಗಳೊಡನೆ ದಯೆಯಿಂದ ವರ್ತಿಸತಕ್ಕದ್ದು ಮತ್ತು ಜೀವಿಸಿದ್ದಾಗ ನಾವು ಅವುಗಳ ಉಪಕಾರವನ್ನು ಹೇಗೆ ಪಡೆಯುತ್ತೇವೊ ಹಾಗೆಯೆ ಸತ್ತ ಮೇಲೂ ಅವುಗಳನ್ನು ಕೃತಜ್ಞತಾಬುದ್ಧಿಯಿಂದ ಉಪಯೋಗಿಸಿಕೊಂಡರೆ ಅದರಲ್ಲಿ ಯಾವ ದೋಷವೂ ಇಲ್ಲ.

೩ ಸತ್ತ ದನಗಳನ್ನು ಉಪಯೋಗಿಸಿಕೊಳ್ಳದಿದ್ದರೆ ಅವು ಆರ್ಥಿಕದೃಷ್ಟಿಯಿಂದ ತುಟ್ಟಿಯಾಗುವವು. ಹಾಗೆ ಆದರೆ ಯಾರೂ ದನಗಳನ್ನು ಸಾಕುವದಿಲ್ಲ ಮತ್ತು ಗೋಪಾಲನೆಯ ಧರ್ಮವನ್ನು ತ್ಯಜಿಸಿಬಿಡುತ್ತಾರೆ.

೪ ಸತ್ತ ದನಗಳನ್ನು ಎಳೆಯುತ್ತ ಒಯ್ಯುವದು ಸರಿಯಲ್ಲ, ಎಳೆಯುವದರಿಂದ ಅವುಗಳ ಚರ್ಮವು ಕೆಡುವದಲ್ಲದೆ ಅದಕ್ಕೆ ಯೋಗ್ಯ ಬೆಲೆಯು ಸಿಕ್ಕುವದಿಲ್ಲ. ಇವುಗಳನ್ನು ಗಾಡಿಯಲ್ಲಿ ಇಲ್ಲವೆ ಹೊತ್ತುಕೊಂಡು ಒಯ್ಯತಕ್ಕದ್ದು.

೫ ಚರ್ಮವನ್ನು ಸರಿಯಾಗಿ ಬಿಚ್ಚಿಕೊಳ್ಳತಕ್ಕದ್ದು. ಮಾಂಸ ಎಲಬುಗಳ ಗೊಬ್ಬರ ಮಾಡಿಕೊಂಡು ಉಪಯೋಗಿಸತಕ್ಕದ್ದು. ಇವುಗಳ ಕರಳುಗಳಿಂದ ಕೂಡ ಎಷ್ಟೋ ಉಪಯುಕ್ತ ವಸ್ತುಗಳು ಆಗಬಲ್ಲವು.

೬ ಈ ಉದ್ಯೋಗಕ್ಕೆ ಸಾಕಷ್ಟು ಕ್ಷೇತ್ರವಿದೆ. ಇದನ್ನು ಸಾಕಷ್ಟು ಬೆಳಿಸಬಹುದು. ಆದ್ದರಿಂದ ಕಲಿತವರು ಈ ಉದ್ಯೋಗಕ್ಕೆ ಸಂಬಂಧಪಟ್ಟ ವಿದ್ಯಾರ್ಜನೆಯನ್ನು ಮಾಡುವದು ಅವಶ್ಯವು.

## ನವಮ ಖಂಡ

# ಖಾದಿ

### ೧ ರಾಟಿಯ ಗುಣಗಳು *

೧ ಪೋಷಕ ಉದ್ಯೋಗವೆನಿಸಿದ ರಾಟಿಯಲ್ಲಿ ಇದ್ದ ಗುಣಗಳು ಮತ್ತಾವ ಉದ್ಯೋಗದಲ್ಲಿಯೂ ಇರುವದಿಲ್ಲ. ಸಂಕ್ಷೇಪದಲ್ಲಿ ಅವು ಇಂತಿರುವವು :

(ಕ) ಇದು ಸುಸಾಧ್ಯವೂ ತತ್ಕಾಲಸಾಧ್ಯವೂ ಇರುತ್ತದೆ; ಏಕೆಂದರೆ :

೧) ಇದಕ್ಕೆ ದೊಡ್ಡ ಉಪಕರಣಗಳು, ಸಾಧನಗಳು ಬೇಕಾಗುವದಿಲ್ಲ. ಹತ್ತಿಯು ಮನೆಯದು, ಉಪಕರಣಗಳೂ ಮನೆಯವೆ.

೨) ಇದಕ್ಕೆ ವಿಶೇಷ ಬುದ್ಧಿ ಮತ್ತು ಕೌಶಲ್ಯ ಬೇಕಾಗುವದಿಲ್ಲ. ಕೇವಲ ಅಶಿಕ್ಷಿತ ಒಕ್ಕಲಿಗನು ಕೂಡ ಇದನ್ನು ಮಾಡಬಲ್ಲನು.

೩) ಇದಕ್ಕೆ ಹೆಚ್ಚು ಪರಿಶ್ರಮವೂ ಬೇಕಾದುದಿಲ್ಲ. ಹೆಣ್ಣುಮಕ್ಕಳು ನೂಲಬಹುದು, ಚಿಕ್ಕಮಕ್ಕಳು, ಮುಮುಕರೂ, ಕಾಯಿಲೆಯವರು ಸಹ ನೂಲಬಹುದು; ಮತ್ತು

೪) ಇದು ಅನೇಕ ಶತಕಗಳ ಅನುಭವದಿಂದ ಸಿದ್ಧವಾದ ಉದ್ಯೋಗವು.

(ಖ) ನೂಲುವವರಿಗೆ ಮನೆಯಲ್ಲಿಯೆ ಉದ್ಯೋಗವು ಸಿಕ್ಕುವದು, ಯಾವಾಗಲೂ ಅವರ ನೂಲು ಖರ್ಚಾಗುವದು, ಬಡವರ ಮನೆಯಲ್ಲಿ ಎರಡು ಬಿಲ್ಲಿ ಉಳಿಯುವದು.

(ಗ) ಇದಕ್ಕೆ ಮಳೆಗಾಲವು ಬೇಕಿಲ್ಲ. ಬೇಸಿಗೆಯಲ್ಲಿಯೂ ಇದು ಹಸಿದವರ ಹೊಟ್ಟೆಗೆ ತುತ್ತು ಅನ್ನವನ್ನು ಹಾಕುವದು.

---

* ತಾ. ೩೧ ಅಕ್ಟೋಬರ ೧೯೨೬ ನೆಯ “ ನವಜೀವನ ”ದಲ್ಲಿರುವ ಗಾಂಧಿಯವರ ಲೇಖವು ಶ್ರೀಯುತ ಗ್ರೇಗ ಕೃತ “ ಖಾದಿಯ ವ್ಯಾಪಕ ಅರ್ಥಶಾಸ್ತ್ರ ” ದ ಪರಿಶಿಷ್ಟದಲ್ಲಿ ಕೊಡಲ್ಪಟ್ಟಿದೆ; ಅದರಿಂದ ಇದು ಉದ್ಧೃತವು.

(ಘ) ಇದಕ್ಕೆ ಧರ್ಮದೆಡರಿಲ್ಲ, ಜನರಿಗೆ ಬೇಡಾದ ರುಚಿಸದ ದಂಧೆಯಲ್ಲ.

(ಚ) ಮನೆಯಲ್ಲಿ ಕುಳಿತಲ್ಲಿಯೆ ಇದರಿಂದ ಮನುಷ್ಯರಿಗೆ ಕೆಲಸ ದೊರೆಯುವದು; ಗಿರಣಿಯ ಕೂಲಿಕಾರರು ಮನೆಯನ್ನೂ ಹೊಲವನ್ನೂ ಬಿಟ್ಟು ಹೋಗಬೇಕಾಗುವದು. ಅದರಿಂದ ಅವರ ಮನೆತನವು ಮುಕ್ಕಾಗುವದು, ಆ ತರದ ಭಯವು ಇದರಲ್ಲಿ ಇಲ್ಲ.

(ಛ) ಹಿಂದುಸ್ತಾನದ ಗ್ರಾಮಪಂಚಾಯತಿಗಳು ಇಂದು ಮರಣೋನ್ಮುಖವಾಗಿರುವವು, ಅವುಗಳ ಪುನರುಜ್ಜೀವನವನ್ನು ಇದು ಮಾಡಬಲ್ಲದು.

(ಜ) ಇದನ್ನು ಬಿಟ್ಟರೆ ಒಕ್ಕಲಿಗನಿಗೆ ಹೇಗೆ ಗತಿ ಇಲ್ಲವೊ ಅದರಂತೆಯೆ ಇದರ ಹೊರತು ನೇಕಾರನ ಕಾರ್ಯವು ಸಾಗದು. ಇವತ್ತು ಹಿಂದುಸ್ತಾನದಲ್ಲಿ ವೆಚ್ಚವಾಗುವ ಬಟ್ಟೆಯ ಒಂದು-ಮೂರಾಂಶದಷ್ಟು ಬಟ್ಟೆಯನ್ನು ನೇಕಾರರು ನೇಯುವರು, ರಾಟೆ ನಿರ್ನಾಮವಾದರೆ ಅವರು ಒಂದು ದಿವಸ ನಿರ್ಗತಿಕರಾಗಬಹುದು.

(ಝ) ಇದರ ಪುನರುದ್ಧಾರವಾಯಿತೆಂದರೆ ಸಾವಿರಾರು ಉದ್ಯೋಗಗಳ ಉದ್ಧಾರವಾಗುವದು. ಬಡಿಗರು, ಕಮ್ಮಾರರು, ಪಿಂಜಾರರು, ಬಣ್ಣಗಾರರು ಮುಂತಾದವರಲ್ಲಿ ಪುನಃ ಜೀವಕಳೆ ಬರುವದು.

(ಟ) ಇದೊಂದರಿಂದಲೆ ಧನದ ಅಸಮಾನ ವಿಭಜನೆಯಲ್ಲಿ ಸಮಾನತೆಯು ಬರಬಹುದು.

(ಠ) ಇದರಿಂದಲೆ ನಿರುದ್ಯೋಗಿತನವು ದೂರಾಗುವದು. ಒಕ್ಕಲಿಗನಿಗೆ ಬಿಡುವಿನ ಸಮಯದಲ್ಲಿ ಕೆಲಸವು ಸಿಕ್ಕುವದಲ್ಲದೆ ಇಂದು ಕೆಲಸವಿಲ್ಲದೆ ಗುಂಪುಗುಂಪಾಗಿ ಅಲೆದಾಡುವ ಶಿಕ್ಷಿತ ಜನರಿಗೂ ಕೆಲಸ ದೊರೆಯುವದು. ಈ ಧಂದೆಯ ಪುನರುದ್ಧಾರದ ಕಾರ್ಯವು ಅಷ್ಟಿಷ್ಟು ದೊಡ್ಡದಿಲ್ಲ. ಈ ಕಾರ್ಯದಲ್ಲಿ ಸಾವಿರಾರು ಶಿಕ್ಷಿತ ಜನರು ತೊಡಗಿದರೂ ಸಾಕಾಗುವದಿಲ್ಲ. ಇಷ್ಟು ದೊಡ್ಡದಿದೆ ಈ ಕಾರ್ಯ.

೨ ಇನ್ನು ರಾಟೆಗಳು ಪುನಃ ಪ್ರಚಾರಗೊಂಡಲ್ಲೆಲ್ಲ ಅವು ಅನೇಕರಿಗೆ ಅಪರಿಮಿತ ಲಾಭವನ್ನು ಮಾಡಿಕೊಟ್ಟಿವೆ. ಅವು ಕೂಡ ರಾಟೆಯ ಗುಣಗಳೆನಿಸುವವು. ಆ ಲಾಭಗಳು ಇಂತಿರುವವು: *

* ಈ ಸೂತ್ರದಲ್ಲಿಯ ಭಾಗವು ಕೂಡ ಗ್ರೇಗರ ಪುಸ್ತಕದಲ್ಲಿ ಕೊಡಲ್ಪಟ್ಟ ೭ನೆಯ ನವ್ಹಂಬರ ೧೯೨೬ ರ “ ನವಜೀವನ ” ದಲ್ಲಿನ ಲೇಖಮಾಲೆಯಿಂದ ಉದ್ಧರಿಸಲ್ಪಟ್ಟದೆ.

(ಕ) ‘ ರಾಟೆಗಳು ಎಷ್ಟೋ ಜನರ ಜೀವನದಲ್ಲಿ ಜೀವನಪರಿವರ್ತನೆಯನ್ನೂ ಹೃದಯಪರಿವರ್ತನೆಯನ್ನೂ ಮಾಡಿರುವವು. ’

(ಖ) ‘ ರಾಟೆಗಳಿಂದಲೆ ಸರಾಯಿಯ ಚಟವು ಕಡಮೆಯಾಗಲಾರಂಭಿಸಿದೆ ಮತ್ತು ಒಕ್ಕಲಿಗರು ಸಾಲದಿಂದ ಮುಕ್ತರಾಗುತ್ತಿದ್ದಾರೆ. ’

(ಗ) ದುಷ್ಕಾಳದಲ್ಲಿ ಸಂಕಟಗಳ ನಿವಾರಣೆ ಮಾಡುವ ಕಾರ್ಯದಲ್ಲಿ ಇದು ಕೀರ್ತಿಯನ್ನು ಪಡೆದಿದೆ.

## ೨ ರಾಟೆಯ ವಿಷಯದಲ್ಲಿದ್ದ ತಪ್ಪು ವಿಚಾರಗಳು

೧ ‘ ರಾಟೆಯನ್ನು ಕುರಿತು ಅನೇಕರು ಅನೇಕ ತರದ ಟೀಕೆಗಳನ್ನು ಮಾಡುವರು. ಈ ಟೀಕೆಗೆ ರಾಟೆಯ ವಿಷಯವಾಗಿ ಇದ್ದ ಅವರ ತಪ್ಪು ವಿಚಾರಗಳೆ ಕಾರಣ. ’ ಕೆಳಗಿನ ಉತ್ತರಗಳಿಂದ ಆ ತಪ್ಪು ವಿಚಾರಗಳು ಯಾವವು ಎನ್ನುವದು ತಿಳಿದುಬರುವದು.

೨ ‘ ರಾಟೆಯು ಗಿರಣಿಯೊಡನೆ ಮೇಲಾಟ ಮಾಡುವಂಥ ಉದ್ಯೋಗವಿರುವದಿಲ್ಲ. ಗಿರಣಿಯ ಸ್ಥಾನವನ್ನು ರಾಟೆಯು ಪಡೆಯತಕ್ಕದ್ದೆಂಬ ವಿಚಾರವೂ ಇರುವದಿಲ್ಲ. ಗಿರಣಿಗಳು ಮಾತ್ರ ರಾಟೆಯ ಪ್ರತಿಸ್ಪರ್ಧಿಗಳಿರುವವು. ಆ ಮಟ್ಟಿಗೆ ಅವುಗಳ ನಿಯಂತ್ರಣವು ಅವಶ್ಯವು. ’

೩ ರಾಟೆಯು ಯಾವದಾದರೊಂದು ಮುಖ್ಯ ಉದ್ಯೋಗದ ಸ್ಥಾನದಲ್ಲಿ ವಿರಾಜಮಾನವಾಗಬೇಕೆಂದು ಇಚ್ಛಿಸುವದಿಲ್ಲ. ‘ ತನ್ನ ಪೂರ್ಣ ಶಕ್ತಿ ಮತ್ತು ಸಂಪೂರ್ಣ ಸಮಯವನ್ನು ಉಪಯೋಗಿಸಲು ಸಾಕಷ್ಟು ಕಾರ್ಯವು ಯಾವ ಸಶಕ್ತ ಮನುಷ್ಯನಿಗೆ ಸಿಕ್ಕುತ್ತಲಿದೆಯೊ ಅವನು ಆ ಕೆಲಸವನ್ನು ಮಾಡಬಾರದೆಂದು ಹೇಳುವದು ರಾಟೆಯ ಉದ್ದೇಶವಿರುವದಿಲ್ಲ. ’ ಆದ್ದರಿಂದ ಈ ದಂಧೆಯಿಂದಾದ ಗಳಿಕೆಯನ್ನು ಉಳಿದ ದಂಧೆಗಳಿಂದಾದ ಗಳಿಕೆಯೊಡನೆ ಹೋಲಿಸಿದರೆ ದೊಡ್ಡ ತಪ್ಪಾಗುವದು.

೪ ‘ ರಾಟೆಯಿಂದ ಹೊಟ್ಟೆ ತುಂಬಿಕೊಳ್ಳಿರಿ . . , ಎರಡನೆ ಉದ್ಯೋಗಗಳನ್ನು ಬಿಟ್ಟು ರಾಟೆಯನ್ನು ತಿರುಗಿಸಿರಿ ಎಂದು ಯಾರೂ ಹೇಳುವದಿಲ್ಲ. ’

೫ ‘ ರಾಟೆಯಿಂದ ದೇಶದ ಧನವು ಅವಶ್ಯವಾಗಿ ವೃದ್ಧಿಹೊಂದುವದು, ಪೂರ್ಣ ಕೂಲಿ ಕೊಡಲಾದರೆ ಅದರಿಂದ ಹೊಟ್ಟೆಯೂ ತುಂಬಬಹುದು. ಆದರೆ ಯಾರಾದರೂ ರಾಟೆಯಿಂದ ಶ್ರೀಮಂತರಾಗಲು ಆಶೆಪಟ್ಟರೆ ಅವರು

ಪಟ್ಟನ್ನು ತಿನ್ನುವರು. ಇದು ಅದರ ಗುಣವೆ ಹೊರತು ದೋಷವಲ್ಲ. ಆ ಮಟ್ಟಿಗೆ ಅದು ಆರ್ಥಿಕ ಸಮಾನತೆಯ ಸಾಧನವಾಗುವದು.'

೬ 'ಹಿಂದುಸ್ತಾನದ ಒಕ್ಕಲಿಗರ ಆರು ತಿಂಗಳುಗಳು ವ್ಯರ್ಥವಾಗಿ ಕಳೆಯುವವು. ಇದರಿಂದ ಅವರ ಎದುರಿನಲ್ಲಿ ನಿರುದ್ಯೋಗಿತನದ ಮತ್ತು ಬಡತನದ ದೊಡ್ಡ ಪ್ರಶ್ನೆಯು ನಿಲ್ಲುವದು. ಈ ಪ್ರಶ್ನೆಯನ್ನು ರಾಟೆಯು ಆಗಿಂದಾಗ್ಗೆ ಬಗೆಹರಿಸಬಲ್ಲದು. ಆದುದರಿಂದ ವ್ಯಾವಹಾರಿಕ ಹಾಗೂ ಕೊನೆಯ ವರೆಗೆ ಬಾಳುವಂಥ ಉಪಾಯವಿದೆಯೆಂದು ರಾಟೆಯ ಪುರಸ್ಕರ್ತರು ಸ್ಪಷ್ಟವಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸುತ್ತಾರೆ.'

೭ 'ರಾಟೆಯಿಂದ ಬಂದ ಉತ್ಪನ್ನವು ಒಂದು ಒಡಕು ಕವಡಿಯಷ್ಟು ಇರಬಹುದು. ಆದರೂ ಒಕ್ಕಲಿಗರ ವರ್ಷದಲ್ಲಿ ಅರ್ಧದಷ್ಟು ವೇಳೆಯು ವ್ಯರ್ಥವಾಗಿ ಹೋಗುವದು. ಇದರಲ್ಲಿ ಅವರಿಗೆ ಒಡಕು ಕವಡಿಯಷ್ಟೂ ಉತ್ಪನ್ನವಾಗುವದಿಲ್ಲ. ಅಲ್ಲದೆ ಅವರಿಗೆ ನಿರುದ್ಯೋಗಿತನದ ರೋಗವು ಅಂಟಿಕೊಳ್ಳುವದು. ಹೀಗಿರದಿದ್ದರೆ ಹಿಂದುಸ್ತಾನದ ಅರ್ಥಶಾಸ್ತ್ರದಲ್ಲಿ ರಾಟೆಗೆ ಸ್ಥಾನವೆ ಇರುತ್ತಿರಲಿಲ್ಲ.'

೮ ರಾಟೆಯಿಂದ ಅತ್ಯಲ್ಪವಾದರೂ ಗಳಿಸಬಹುದೆಂದು ಮೇಲೆ ಹೇಳಲಾಗಿದೆ. ಆತ್ಮಸಂತೋಷಕ್ಕೆಂದು ನಾವು ಹಾಗೆ ಹೇಳಿಲ್ಲ; ಆದರೆ ರಾಟೆಯು ಎಷ್ಟು ಉಪಯುಕ್ತ ಇರುವದೆಂಬದನ್ನು ತೋರಿಸುವದಕ್ಕಾಗಿ ಹಾಗೆ ಹೇಳಲಾಗಿದೆ. ವಾಸ್ತವಿಕವಾಗಿ ರಾಟೆಯಿಂದಲೆ ಆಗಲಿ, ಮತ್ತಾವ ಕೆಲಸದಿಂದಲೆ ಆಗಲಿ, ಅತ್ಯಲ್ಪ ಉತ್ಪನ್ನವೆ ದೊರೆಯುವ ಸ್ಥಿತಿಯು ಸಂತೋಷಜನಕವಲ್ಲ. ಈ ವಿಷಯವಾಗಿ 'ಸ್ವಾವಲಂಬೀ ಮತ್ತು ಕೂಲಿಯ ಖಾದಿ' ಪ್ರಕರಣದಲ್ಲಿ ಹೆಚ್ಚು ವಿಚಾರಗಳು ಮಂಡಿಸಲಾಗಿವೆ.

## ೩ ಖಾದಿಯೂ ಗಿರಣಿಬಟ್ಟೆಯೂ

೧ ಖಾದಿ ಮತ್ತು ಗಿರಣಿ ಬಟ್ಟೆ ಇವೆರಡರಲ್ಲಿ ಮೇಲಾಟವನ್ನು ಮಾಡಗೊಡತಕ್ಕದ್ದಲ್ಲ. ಈ ಮೇಲಾಟವು ಒಳಿತಾದುದೆಂದೂ ಎಣಿಸಲ್ಪಡುವದಿಲ್ಲ.

೨ ರಾಟೆಯು ಕೋಟಿಗಟ್ಲೆ ಜನರ ಗೃಹೋದ್ಯೋಗವು, ಜೀವನದ ಆಧಾರವು. ಇದು ನಾಶವಾಗುವಂತೆ ಗಿರಣಿಗಳ ಉದ್ಯೋಗ ನಡೆದರೆ ಮತ್ತು ಅವುಗಳ ಉದ್ಯೋಗವನ್ನು ನಡೆಯಗೊಟ್ಟರೆ ಅವನ್ನು ನಡೆಸುವವನು ಮತ್ತು ನಡೆಯಗೊಡುವವನು ಜನರ ಕಲ್ಯಾಣಚಿಂತನೆ ಮಾಡುವದಿಲ್ಲವೆನ್ನಬಹುದು.

೩ ಆದ್ದರಿಂದ, ಗಿರಣಿಗಳು ಒಂದು ವೇಳೆ ಇದ್ದರೂ ಅವು ರಾಟೆಯ

ಕಾರ್ಯಕ್ಕೆ ಅಡ್ಡಿ ಮಾಡುವಂತಹವು ಇರಕೂಡದು. ಕೋಟಿಗಟ್ಲೆ ಜನರು ಯಾವ ಬಗೆಯ ನೂಲನ್ನು ನೂಲುವರೊ ಮತ್ತು ಬಟ್ಟೆಯನ್ನು ನೇಯು ವರೊ ಅದನ್ನು ಗಿರಣಿಗಳು ಮಾಡಕೂಡದೆಂದು ಅಷ್ಟಣೆ ಇರತಕ್ಕದ್ದು.

೪ ವ್ಯಕ್ತಿಯ ಪ್ರಶ್ನೆಯನ್ನು ಬಿಟ್ಟು, ರಾಷ್ಟ್ರೀಯ ಅರ್ಥಶಾಸ್ತ್ರದ ದೃಷ್ಟಿ ಯಿಂದ ವಿಚಾರಮಾಡಿದರೆ ಯಾವದಾದರೂ ವಸ್ತುವಿನ ಮೂಲ ಬೆಲೆಯನ್ನು ಕಂಡುಹಿಡಿಯುವಾಗ ಅದಕ್ಕಾಗಿ ಉಪಯೋಗಿಸಿದ ಪದಾರ್ಥ, ಬಂಡವಾಳ ಕೂಲಿ ಮತ್ತು ಅದನ್ನು ಮಾಡುವವನಿಗೆ ತಗಲಿದ ವೆಚ್ಚದ ವಿಚಾರವನ್ನು ಮಾತ್ರ ಮಾಡತಕ್ಕದ್ದಲ್ಲ. ಆದರೆ ಈ ರೀತಿ ಆ ವಸ್ತುಗಳನ್ನು ನಿರ್ಮಾಣ ಮಾಡುವದರಿಂದ ನಿರುದ್ಯೋಗಿಗಳ ಸಂಖ್ಯೆಯು ಬೆಳೆಯುತ್ತಿದ್ದರೆ ಆ ನಿರು ದ್ಯೋಗಿಗಳನ್ನು ಕಾಪಾಡುವ ವೆಚ್ಚವು ಪ್ರಜರ ಮೇಲೆಯೆ ಬೀಳುವದು, ಈ ವೆಚ್ಚವು ಕೂಡ ಆ ವಸ್ತುಗಳ ಮೇಲೆ ಬೀಳುವದೆಂದು ತಿಳಿಯತಕ್ಕದ್ದು. ಈ ದೃಷ್ಟಿಯಿಂದ ನೋಡಿದರೆ ಖಾದಿಯುಗಿಂತಲೂ ಗಿರಣಿ ಬಟ್ಟೆಯೆ ತುಟ್ಟಿ ಬೀಳುವದೆಂಬದು ಗೊತ್ತಾಗುವದು. *

---

* ಈ ವಿಷಯವನ್ನು ತಿಳಿಸುವದಕ್ಕಾಗಿ ಮಿ. ಗ್ರೇಗರ ಪುಸ್ತಕದಿಂದ ಎತ್ತಿಕೊಂಡ ಈ ಅಂಕಿಗಳು ಹೆಚ್ಚು ಉಪಯುಕ್ತವಾಗುವವು. ಪ್ರತಿಯೊಬ್ಬನು ಕೈಯಿಂದ ಎಷ್ಟು ನೂಲಬಲ್ಲನೊ ಮತ್ತು ನೇಯಬಲ್ಲನೊ ಅದಕ್ಕಿಂತಲೂ ಗಿರಣಿಯಲ್ಲಿ ಪ್ರತಿಯೊಬ್ಬನು ಪ್ರತಿಗಂಟೆಗೂ ೨೦೩ ರಿಂದ ೨೩೬ ಪಟ್ಟು ಹೆಚ್ಚು ನೂಲಬಲ್ಲನು ಮತ್ತು ೨೦ ಪಟ್ಟು ಹೆಚ್ಚು ನೇಯಬಲ್ಲನು. (೧೯೨೬ರಲ್ಲಿಯ ಲೆಕ್ಕವಿದು). ಇಬ್ಬರೂ ಸಮನಾಗಿ ಕೆಲಸ ಮಾಡಿದರೆ ಗಿರಣಿಯ ಕೂಲಿಕಾರನು ೩೦೦ ಕ್ಕಿಂತ ಹೆಚ್ಚು ಕೈಯಿಂದ ನೂಲುವವರನ್ನೂ ಗಿರಣಿಯ ನೇಕಾರನು ೨೦ ಕ್ಕಿಂತ ಹೆಚ್ಚು ಕೈಯಿಂದ ನೇಯುವವರನ್ನೂ ನಿರುದ್ಯೋಗಿಗಳನ್ನಾಗಿ ಮಾಡುತ್ತಾನೆ. ಇಂಥ ನಿರುದ್ಯೋಗಿಗಳ ಮುಕ್ಕಾಲು ಸಮಯವು ಅನ್ಯ ಉದ್ಯೋಗಗಳಲ್ಲಿ ಹೊರಟುಹೋಗುತ್ತದೆ ಎಂದು ತಿಳಿದು ಹೆಚ್ಚು ಸಡಲಿಟ್ಟು ಲೆಕ್ಕ ಮಾಡಿದರೂ ೨೬೭॥ ಲಕ್ಷ ಜನರಿಗೆ ದಿನಾಲು ಒಬ್ಬನಿಗೆ ಮೂರು ಆಣೆಗಳಷ್ಟು ಹಾನಿಯಾಗುತ್ತದೆ. ಇವರನ್ನು ಸಲಹುವ ವೆಚ್ಚವನ್ನು ಪರದೇಶೀ ಅಥವಾ ಸ್ವದೇಶೀ ಗಿರಣಿಗಳ ಬಟ್ಟೆಯ ಮೇಲೆ ಹಾಕಿದರೆ ಪ್ರತಿಯೊಂದು ಗಜಕ್ಕೆ ೦-೧-೯ ಪೈ ಮತ್ತು ಕೇವಲ ಪರದೇಶೀ ಬಟ್ಟೆಯ ಮೇಲೆ ಹಾಕಿದರೆ ಪ್ರತಿಯೊಂದು ಗಜಕ್ಕೆ ೦-೫-೨ ಪೈಯಷ್ಟು ಬೆಲೆಯು ಹೆಚ್ಚಾಗುವದು. ೧೯೨೬ ರಲ್ಲಿ ಮಾಡಿದ ಲೆಕ್ಕದ ಪ್ರಕಾರ ಖಾದೀ ಮತ್ತು ಗಿರಣಿ ಬಟ್ಟೆಯ ನಡುವೆ ಎರಡು ಆಣೆಗಳ ಅಂತರವಿತ್ತು. ಇಂದು ಅದಕ್ಕೂ ಕಡಿಮೆಯಾಗಿದೆ. ಪ್ರಜಾತಂತ್ರ ಸರಕಾರದವರೆ ಈ ನಿರುದ್ಯೋಗಿಗಳ ನಿರ್ವಾಹದ ವೆಚ್ಚವನ್ನು ಬಟ್ಟೆಯ ಗಿರಣಿಗಳಿಂದ ಕರರೂಪದಿಂದ ವಸೂಲು ಮಾಡಲಾದೀತು. ಆ ಮೇಲೆ ಗಿರಣಿ ಬಟ್ಟೆಯು ಅಗ್ಗವಾಗುವದಿಲ್ಲವೆಂಬುದೂ ಗೊತ್ತಾದೀತು. ಆದರೆ ಈಗ ಈ ವೆಚ್ಚವನ್ನು ಪ್ರಜೆಯು ಪರೋಕ್ಷವಾಗಿ ಕೊಡುತ್ತಿದೆ. ಆದ್ದರಿಂದ ಇದು ಪೇಟೆಯ ದರದಲ್ಲಿ ಕಂಡುಬರುವದಿಲ್ಲ. ಈ ವಿಷಯವಾಗಿ ಹೆಚ್ಚು ಮಾಹಿತಿಯನ್ನು ಮಿ॥ ಗ್ರೇಗರ ಪುಸ್ತಕದಿಂದ ಪಡೆಯಬಹುದು. —ಕಿ. ಘ. ಮ.

೫ ಈ ರೀತಿ ಪ್ರಜರ ಹಿತಚಿಂತನೆಯನ್ನು ಮಾಡುವ ಸರಕಾರವಿದ್ದರೆ ನಿರುದ್ಯೋಗಿತನದ ನಿರ್ಮೂಲನವನ್ನು ಮಾಡಿದವಿನಾ ಖಾದಿಯೊಡನೆ ಗಿರಣಿಯು ಮೇಲಾಟವನ್ನು ನಡೆಸುವಂತೆ ಎಂದೂ ಅನುವುಗೊಡಲಿಕ್ಕಿಲ್ಲ.

೬ ಇಂತಹ ಸರಕಾರವು ಇಲ್ಲದ್ದರಿಂದ ಜನರು ಬಡವರ ಮೇಲಿನ ಕನಿಕರದಿಂದಾದರೂ ಗಿರಣಿಯ ಇಂಥ ಉದ್ಯೋಗವನ್ನು ನಿಲ್ಲಿಸತಕ್ಕದ್ದು.

೭ ಗಿರಣಿಯ ಹಾನಿಕರವಾದ ಮೇಲಾಟವನ್ನು ನಿಲ್ಲಿಸುವದಕ್ಕಾಗಿ ಪರದೇಶೀ ವಸ್ತ್ರದ ಮತ್ತು ಖಾದಿಯ ಕ್ಷೇತ್ರದಲ್ಲಿ ಕೈ ಹಾಕುವ ದೇಶೀ ಗಿರಣಿಗಳನ್ನು ಬಹಿಷ್ಕರಿಸುವದು, ಖಾದೀ ಧರಿಸುವ ಪ್ರತಿಜ್ಞೆ ಮಾಡುವದು, ಖಾದಿಯ ಬಗ್ಗೆ ದಾನಮಾಡುವದು, ಯಜ್ಞಕರ್ಮವೆಂದು ತಿಳಿದು ನೂಲುವದು, ಮುಂತಾದವುಗಳು ಅಹಿಂಸಾತ್ಮಕ ಮಾರ್ಗಗಳಿರುವವು.

## ೪ ರಾಟಿಯೂ ಕೈಮಗ್ಗವೂ

೧ ಕೈನೂಲಿನ ಬದಲು ಕೇವಲ ಕೈನೇಯಿಗೆಗೆ ಮಾತ್ರ ಉತ್ತೇಜನವನ್ನು ಕೊಡತಕ್ಕದ್ದು ಮತ್ತು ಗಿರಣಿಯ ನೂಲನ್ನು ಬಹಿಷ್ಕರಿಸದೆ ಗಿರಣಿಯ ನೇಯಿಗೆಯನ್ನು ಮಾತ್ರ ಬಹಿಷ್ಕರಿಸತಕ್ಕದ್ದು ಎನ್ನುವ ವಿಚಾರವು ರಾಟಿಯ ವಿಷಯದಲ್ಲಿದ್ದ ತಪ್ಪು ತಿಳಿವಳಿಕೆಯಿಂದ ಹುಟ್ಟಿದೆ, ಏಕೆಂದರೆ:

೨ 'ಯಾವ ಪ್ರಕಾರ ನೂಲುವ ಉದ್ಯೋಗವು ಸಾರ್ವತ್ರಿಕವಾಗಬಲ್ಲದೊ ಅದೇ ರೀತಿಯಾಗಿ ಕೈನೇಯಿಗೆಯ ಉದ್ಯೋಗವು ಸಾರ್ವತ್ರಿಕವಾಗಲಾರದು.' *

೩ ನೂಲುವದು ಪೋಷಕ ಉದ್ಯೋಗವಾಗಬಲ್ಲದು ಆದರೆ ನೇಯಿಗೆಯು ಸ್ವತಂತ್ರ ಉದ್ಯೋಗವೆ ಆಗಬಲ್ಲದು. ಈ ವಿಚಾರವು ಈ ಸೂಚನೆ ಮಾಡುವವರ ಲಕ್ಷ್ಯದಲ್ಲಿ ಬಂದಿಲ್ಲ.

---

* "ಹಿಂದುಸ್ತಾನಕ್ಕೆ ಪ್ರತಿವರ್ಷ ೪೬೬ ಕೋಟಿ ಗಜ ಬಟ್ಟೆಯು ಬೇಕಾಗುತ್ತದೆ. (ಇಷ್ಟೆಲ್ಲವನ್ನೂ ಕೈಮಗ್ಗದ ಮೇಲೆಯೆ ನೇಯಿಸಿದರೂ) ಹೆಚ್ಚೆಂದರೆ ಅಂದರೆ ದಿನಾಲು ಎರಡು ಗಂಟೆ ಕೆಲಸ ಮಾಡುವ ೯೦ ಲಕ್ಷ ನೇಕಾರರನ್ನು ನಾವು ಕಾರ್ಯದಲ್ಲಿ ತೊಡಗಿಸಬಹುದು. ಇಷ್ಟು ನೇಕಾರರನ್ನು ಕೆಲಸದಲ್ಲಿ ತೊಡಗಿಸುವದಕ್ಕಿಂತ ಇಷ್ಟು ಕುಟುಂಬಗಳನ್ನು ಕಾರ್ಯದಲ್ಲಿ ತೊಡಗಿಸುವದು ಒಳಿತೆಂದು ಒಪ್ಪಿದರೆ ದಿನದ ಎರಡಾಣೆಗಳು ಅಷ್ಟು ಜನರಲ್ಲಿ ಹಂಚಿ ಹೋಗುವವು. ಇದರಿಂದ ಪ್ರತಿಯೊಬ್ಬನ ಗಳಿಕೆಯು ಪ್ರಮಾಣತಃ ನೋಡಿದರೆ ಕಡಿಮೆಯಾಗುವದು." (ತಾ. ೧೪-೧೧-೧೯೨೬ ನೇ "ನವಜೀವನ"ದ ಆಧಾರದಿಂದಲೆ ಈ ಪ್ರಕರಣದಲ್ಲಿಯ ಸೂತ್ರಗಳು ಬರೆಯಲ್ಪಟ್ಟಿವೆ. ಮಿ|| ಗ್ರೇಗರ ಪುಸ್ತಕದಲ್ಲಿ ಈ ಲೇಖವು ಸಂಪೂರ್ಣವಾಗಿ ಕೊಡಲ್ಪಟ್ಟಿದೆ. — ಕಿ. ಘ. ಮ.)

೪ ಒಂದು ವೇಳೆ ಕಾಯಿದೆಯಿಂದಾದರೂ ಗಿರಣಿಯ ನೇಯಿಗೆಯು ನಿಲ್ಲಿಸಲ್ಪಡದಿದ್ದರೆ ಜನರು ತಮ್ಮ ಪ್ರಯತ್ನದಿಂದಲೆ ಅದನ್ನು ಬಹಿಷ್ಕರಿಸ ಬೇಕಾಗುವದು ಮತ್ತು ನೇಕಾರರು ಗಿರಣಿಗಳ ಯಜಮಾನರ ದಯೆಯಿಂದಲೆ ಉಪಜೀವಿಸಬೇಕಾಗುವದು. 'ಏಕೆಂದರೆ ಗಿರಣಿಗಳು ಕೈನೇಯಿಗೆಯೊಡನೆ ಮೇಲಾಟ ಮಾಡುತ್ತಿವೆ . . . ( ಮತ್ತು ) ದಿನದಿನಕ್ಕೂ ಗಿರಣಿಗಳೆ ಹೆಚ್ಚೆಚ್ಚಾಗಿ ನೇಯಿಗೆ ಕಾರ್ಯವನ್ನು ಮಾಡುತ್ತ ಸಾಗಿವೆ . . . ಈ ಮೇಲಾಟವು ಹೆಚ್ಚು ವಿಷಮವೂ ಘಾತಕವೂ ಆಗುತ್ತ ಹೋಗುವದು.'

೫ ಇದಕ್ಕೆ ವಿಪರೀತವಾಗಿ 'ಕೈಮಗ್ಗ ಮತ್ತು ರಾಟೆ ಇವೆರಡೂ ಅವಳಿ ಜವಳಿ ಸಹೋದರ–ಸಹೋದರಿ ಆಗಿರುತ್ತವೆ. ಇವುಗಳಲ್ಲಿ ಒಂದು ಇನ್ನೊಂದನ್ನು ಬಿಟ್ಟು ಬದುಕಿರಲಾರದು.'

೬ 'ಪ್ರತಿಯೊಂದು ಮನೆಯಲ್ಲಿ ಒಂದು ರಾಟೆಯು ಇರತಕ್ಕದ್ದು ಮತ್ತು ಪ್ರತಿಯೊಂದು ಚಿಕ್ಕ ವಸತಿಯ ಗ್ರಾಮದಲ್ಲಿ ಒಂದು ಕೈಮಗ್ಗವಿರ ತಕ್ಕದ್ದು. ಇವು ಭಾವೀ ಯುಗದ ಘಟನೆಯ ಮಂತ್ರಗಳು.'

## ೫ ಖಾದೀ ಉತ್ಪತ್ತಿಯ ಕ್ರಿಯೆಗಳು

೧ ಹಿಂಜುವದು ಮೊದಲುಗೊಂಡು ನೇಯಿಗೆಯ ವರೆಗಿನ ಎಲ್ಲ ಖಾದೀ ಹುಟ್ಟುವಳಿಯ ಕಾರ್ಯಗಳು ಮನೆಯಲ್ಲಿಯೆ ಆಗತಕ್ಕದ್ದು. ಇವುಗಳಲ್ಲಿ ಒಂದಾದರೂ ಕ್ರಿಯೆಯು ಕಾರಖಾನೆಯನ್ನು ಅವಲಂಬಿಸಿದರೆ ಅದು ಒಂದಿಲ್ಲೊಂದು ದಿನ ಖಾದಿಯ ಉದ್ದೇಶವನ್ನು ಸಂಕಟಕ್ಕೀಡುಮಾಡುವದು.

೨ ಆದ್ದರಿಂದ ಹತ್ತೀ ಅರೆಯುವ ರಾಟೆಯು ಮತ್ತು ಹಿಂಜುವ ಬಿಲ್ಲು ನೂಲುವ ರಾಟೆಯ ಜೊತೆಯಲ್ಲಿ ಇರತಕ್ಕವುಗಳೆ ಎಂದು ತಿಳಿಯತಕ್ಕದ್ದು.

೩ ಹತ್ತೀ ಅರೆಯುವ ರಾಟೆ, ಹಿಂಜುವ ಬಿಲ್ಲು ಮತ್ತು ನೂಲುವ ರಾಟೆಯಲ್ಲಿ ಸುಧಾರಣೆ ಮಾಡಬೇಕಾಗಿದ್ದಲ್ಲಿ ಅವು ಗೃಹೋದ್ಯೋಗಗಳಾಗಿ ಉಳಿಯುವಂತೆಯೆ ಅವುಗಳಲ್ಲಿ ಸುಧಾರಣೆ ಮಾಡತಕ್ಕದ್ದು.

೪ ಖಾದಿಯನ್ನು ಸುಧಾರಿಸಬೇಕಾದರೆ ಹತ್ತಿ ಸಂಗ್ರಹದಿಂದ ಮೊದಲುಗೊಂಡು ನೇಯಿಗೆ ವರೆಗಿನ ಎಲ್ಲ ಕ್ರಿಯೆಗಳ ಮತ್ತು ಯಂತ್ರಗಳ ಅಭ್ಯಾಸವನ್ನು ಸೂಕ್ಷ್ಮವಾಗಿ ಮಾಡತಕ್ಕದ್ದು. ಆ ಮೇಲೆ ಅವುಗಳ ಸುಧಾರಣೆಗೆ ಕೈ ಹಾಕುವದು ಒಳಿತು.

೫ ಹತ್ತಿಯ ಹೊಲವಿದ್ದವರು ತಮ್ಮ ಉಪಯೋಗಕ್ಕಾಗಿ ತಮ್ಮ ಹೊಲದ ಹತ್ತಿಯನ್ನೇ ಸಂಗ್ರಹಿಸುವದು ಮೊದಲನೆ ಕೆಲಸವು. ಈ ರೀತಿ ಮಾಡುವ ಒಕ್ಕಲಿಗನು ಒಳ್ಳೆಯ ಹತ್ತಿಕಾಳುಗಳನ್ನು ದೊರಕಿಸಲು ಯತ್ನಿಸುವನು ಮತ್ತು ಹತ್ತಿಯಲ್ಲಿ ಕಸರು ಬರದಂತೆ ಹತ್ತಿಯನ್ನು ಬಿಡಿಸಿಕೊಳ್ಳುವನು. ಈ ತನ್ನ ಕೆಲಸವನ್ನು ಒಕ್ಕಲಿಗನು ತಾನೇ ಮಾಡುತ್ತ ಹೋಗುವನು. ಆದರೆ ಅವನಿಗೆ ಅದರ ಮಹತ್ವವನ್ನು ತಿಳಿಸಿ ಸರಿಯಾದ ಮಾರ್ಗವನ್ನು ತೋರಿಸಿ ಆಗಾಗ್ಗೆ ಸಲಹೆಗಳನ್ನು ಕೊಡುವದು ಅಗತ್ಯವಿರುವದು.

೬ ರಾಟೆಯಿಂದ ಹತ್ತಿಯನ್ನು ಅರೆದರೆ ಹತ್ತಿಯ ಕಾಳುಗಳಿಗೆ ಧಕ್ಕೆ ತಗಲುವದಿಲ್ಲ, ಹತ್ತಿಯ ಎಳೆಯ ಕಸುವೂ ಕಡಿಮೆಯಾಗುವದಿಲ್ಲ. ಆಗಲೆ ಕಾಳು ತೆಗೆದ ಹತ್ತಿಯು ನೂಲಲಿಕ್ಕೆ ಬಹು ಒಳ್ಳೆಯದು. ಆ ಹತ್ತಿಯಿಂದ ನೂಲಲು ಶ್ರಮವಾಗುವದಿಲ್ಲ.

೭ ಉತ್ತಮ ನೂಲು ಹೊರಡಬೇಕಾದರೆ ಉತ್ತಮ ಹಂಜಿ ಬೇಕು. ಸರಿಯಾಗಿ ನೂಲಲು ಯಾರಿಗೆ ಬರುತ್ತದೆಯೊ ಅವರಿಗೆ ಒಳ್ಳೆಯ ಮತ್ತು ಕೆಡಕು ಹಂಜಿಯೊಳಗಿನ ಭೇದವು ಗೊತ್ತಾಗುವದು. ಹಿಂಜುವದನ್ನರಿತವರಿಗೆ ಅದರಲ್ಲಿನ ಕ್ರಿಯೆಯ ಭೇದಗಳು ತಿಳಿಯುವವು. ಆದ್ದರಿಂದ ಹಿಂಜುವದು ಯಾರಿಗೆ ಸರಿಯಾಗಿ ಬರುವದೊ ಅವರು ಎರಡನೆಯವರು ಹಿಂಜಿ ಮಾಡಿದ ಹಂಜಿಯನ್ನು ಉಪಯೋಗಿಸಲು ಹಿಂಜರಿಯುವರು.

೮ ಕೆಟ್ಟ ಹಂಜಿಯು ನೂಲಿನ ನಂಬರನ್ನು ಕಡಿಮೆ ಮಾಡುವದು. ಕೆಟ್ಟ ಹಂಜಿಯ ಎಳೆಗಳು ಆಗಾಗ್ಗೆ ಹರಿಯುವವು. ಇದರಿಂದ ಬಹಳ ಆರ್ಥಿಕ ಹಾನಿಯಾಗುವದು.

೯ ಯಾವ ಹತ್ತಿಯಿಂದ ಎಷ್ಟು ಜಿನಗು ಮತ್ತು ದಪ್ಪ ನೂಲು ಹೊರಡಬಹುದೊ ಅದಕ್ಕಿಂತ ಹೆಚ್ಚು ದಪ್ಪ ಅಥವಾ ಜಿನಗು ನೂಲುವದು ಹಾನಿಕರವು. ಸಾಮಾನ್ಯವಾಗಿ ದಪ್ಪ ನೂಲುವದರ ಕಡೆಗೆ ಸರ್ವರ ಒಲವು ಇರುವದು. ಇದನ್ನು ತಡೆಯತಕ್ಕದ್ದು. ಹತ್ತಿಯಿಂದ ಹೊರಡಲು ಸಾಧ್ಯವಿದ್ದಷ್ಟು ಜಿನಗು ನೂಲನ್ನು ತೆಗೆಸುವದರ ಕಡೆಗೆ ಖಾದೀ ಉತ್ಪಾದಕರು ಲಕ್ಷ್ಯಗೊಡತಕ್ಕದ್ದು.

೧೦ ನೂಲಿನ ಹುರಿಕಟ್ಟು ಮತ್ತು ಸಮಾನತೆಯ ಕಡೆಗೆ ಕೂಡ ಉತ್ಪಾದಕರು ಗಮನಕೊಡತಕ್ಕದ್ದು.

೧೧ ಜಿನಗು ನೂಲೆಂದರೆ ಸ್ವಲ್ಪ ಹತ್ತಿಯಲ್ಲಿ ಹೆಚ್ಚು ಬಟ್ಟೆ, ಹುರಿಕಟ್ಟಿನ ನೂಲೆಂದರೆ ಬಹು ದಿನ ಬಾಳುವ ಬಟ್ಟೆ, ಸಮವಾದ ನೂಲೆಂದರೆ ನಯವಾದ ಮತ್ತು ಸುಂದರವಾದ ಬಟ್ಟೆ. ಹುರಿಕಟ್ಟಿನ ಮತ್ತು ಸಮವಾದ ನೂಲಿದ್ದರೆ ನೇಕಾರನು ಕಡಿಮೆ ಕೂಲಿಯಿಂದ ನೇಯಲು ಒಪ್ಪುವನು. ಆದುದರಿಂದ ಇವೆಲ್ಲವೂ ಖಾದಿಯನ್ನು ಅಗ್ಗಗೊಳಿಸುವ ಮಹತ್ವದ ಅಂಗಗಳೆಂದು ಸ್ಪಷ್ಟವು.

೧೨ ಖಾದೀ ಸೇವಕನಿಗೆ ಖಾದೀ ಉತ್ಪತ್ತಿಯ ಸರ್ವ ಕ್ರಿಯೆಗಳ ಅನುಭವ ಜನ್ಯ ಜ್ಞಾನವಿರತಕ್ಕದ್ದು. ಖಾದಿಯ ಹುಟ್ಟುವಳಿಗಾಗಿ ಉಪಯೋಗಿಸಲ್ಪಡುವ ಎಲ್ಲ ಯಂತ್ರಗಳ ಗುಣದೋಷಗಳ ಹಾಗೂ ಅವನ್ನು ಸರಿಪಡಿಸುವ ಜ್ಞಾನವೂ ಇರತಕ್ಕದ್ದು. ಹಳ್ಳಿಯ ಒಕ್ಕಲಿಗರಷ್ಟೆ ಅಲ್ಲ, ಬಡಿಗ, ಕಮ್ಮಾರ ಮುಂತಾದ ಕೆಲಸಗಾರರಿಗೂ ಇದನ್ನು ಕಲಿಸುವಷ್ಟು ನೈಪುಣ್ಯವು ಅವನಲ್ಲಿರತಕ್ಕದ್ದಲ್ಲದೆ ಎಲ್ಲವನ್ನೂ ತೂಗಿಸಿಕೊಂಡು ಹೋಗುವ ಶಕ್ತಿಯೂ ಅವನಲ್ಲಿರತಕ್ಕದ್ದು. ಅರ್ಥಾತ್ ಅವನೊಬ್ಬ ಕುಶಲ ಶಿಲ್ಪಿಯಾಗಿರಬೇಕು. ಖಾದಿಯ ಅರ್ಥಶಾಸ್ತ್ರವನ್ನು ಬಲ್ಲವನೂ ಇರಬೇಕು.

## ೬ ಸ್ವಾವಲಂಬಿ ಮತ್ತು ಕೂಲಿ ಖಾದಿ

೧ ಒಕ್ಕಲಿಗನು ತನ್ನ ಹೊಲದ ಹತ್ತಿಯನ್ನೆ ತಂದು ಕಾಳು ತೆಗೆದು ಹಿಂಜಿ ನೂಲಬೇಕು ಮತ್ತು ಕೂಲಿ ಕೊಟ್ಟು ನೇಕಾರನಿಂದ ನೇಯಿಸಿಕೊಳ್ಳಬೇಕು. ಹೀಗೆ ಮಾಡಿದರೆ ಅವನಿಗೆ ಗಿರಣಿಯ ಬಟ್ಟೆಗಿಂತಲೂ ಖಾದಿಯು ಅಗ್ಗ ಬೀಳುವದು. ಈ ರೀತಿ ಮಾಡಿಕೊಂಡ ಖಾದಿಯೆ ಸ್ವಾವಲಂಬಿ ಖಾದಿ ಎನಿಸುವದು.

೨ ಒಕ್ಕಲಿಗನು ವಾಹನದ ಖರ್ಚುಬಿದ್ದು ಬಂದ ಹತ್ತಿಯನ್ನು ಕೊಂಡು ತಾನೇ ಸ್ವತಃ ಹಿಂಜಿ, ನೂತು ಬಟ್ಟೆ ನೇಯಿಸಿಕೊಂಡರೆ ಆ ಬಟ್ಟೆಯೂ ಅವನಿಗೆ ಗಿರಣಿಯ ಬಟ್ಟೆಗಿಂತ ಅಗ್ಗವಾಗುವದು; ಎಂದರೆ ಗಿರಣಿಯ ಬಟ್ಟೆಗಿಂತಲೂ ಅತ್ಯಂತ ಕಡಿಮೆ ತುಟ್ಟಿಬೀಳುವದು. ಈ ತುಟ್ಟಿತನ ಕೂಡ ನೂಲು ಹುರಿಕಟ್ಟು ಇದ್ದರೆ ಮತ್ತು ನೂಲಿನ ನಂಬರಿನಲ್ಲಿ ಸುಧಾರಣೆಯಾದರೆ ಇಲ್ಲದಂತಾಗುವದು.

೩ ಕೂಲಿಯಿಂದ ಮಾಡಿಸಿದ ಖಾದಿಯ ಪ್ರಕಾರಗಳಲ್ಲಿಯೂ ಅಗ್ಗ-ಳತೆಯ ವಿಷಯದಲ್ಲೂ ಇಂದಿನ ವರೆಗಾದ ಪ್ರಗತಿಯು ಅದರ ಭಾವೀ ಉನ್ನತಿಯನ್ನೂ ಚರಖಾಪ್ರವೃತ್ತಿಯು ಸರಿಯಾದ ಮಾರ್ಗ ಹಿಡಿದಿರುವದನ್ನೂ ಸೂಚಿಸುತ್ತಿರುವದೆಂದು ನಿರಾತಂಕವಾಗಿ ಹೇಳಬಹುದು.

೪ ಕೂಲಿಯ ಖಾದಿಯನ್ನು ಅಗ್ಗ ಮಾಡುವದಕ್ಕಾಗಿ ಪಟ್ಟ ಪರಿಶ್ರಮವು ಯೋಗ್ಯ ಮಾರ್ಗಗಳಿಂದ ಮಾಡಲ್ಪಡಲಿಲ್ಲವೆಂದು ಸ್ಪಷ್ಟವಾಗಿ ಕಂಡುಬಂದಿದೆ. ಯಾವ ಬಡವರ ಕಲ್ಯಾಣಕ್ಕಾಗಿ ಈ ಕಾರ್ಯವು ಪ್ರಾರಂಭವಾಯಿತೊ ಅದರಿಂದ ಅವರಿಗೆ ಹೊಟ್ಟೆಯ ಮಟ್ಟಿಗಾದರೂ ಪ್ರತಿಫಲವು ದೊರೆಯುತ್ತದೊ ಇಲ್ಲವೊ ಎನ್ನುವದರ ಕಡೆಗೆ ಸಂಪೂರ್ಣ ಗಮನವು ಕೊಡಲ್ಪಡಲಿಲ್ಲ.

೫ ಖಾದಿ ಇಲ್ಲವೆ ಉಳಿದ ಉದ್ಯೋಗಗಳ ಉದ್ಧಾರಕ್ಕಾಗಿ ಕೆಲಸ ಮಾಡುವಂಥ ಸೇವಕರ ಮತ್ತು ಸಂಘಗಳ ಧರ್ಮವು ಕೇವಲ ಉದ್ಯೋಗಗಳನ್ನು ಹಾಗೂ ಹೀಗೂ ಮಾಡಿ ನಡೆಸಿಕೊಂಡು ಹೋಗುವದಷ್ಟೆ ಅಲ್ಲ. ಆ ಉದ್ಯೋಗಗಳಲ್ಲಿ ತೊಡಗಿದವರಿಗೆ ಹೊಟ್ಟೆಯ ಮಟ್ಟಿಗಾದರೂ ಪ್ರತಿಫಲವು ಸಿಕ್ಕುವದೊ ಇಲ್ಲವೊ ಎಂಬದನ್ನೂ ಕೂಲಂಕಷವಾಗಿ ನೋಡುವದು ಅವರ ಧರ್ಮವು. ಒಂದು ವೇಳೆ ಪರಿಶ್ರಮ ಮಾಡುವವರಿಗೆ ಅಷ್ಟಾದರೂ ಪ್ರತಿಫಲವು ದೊರೆಯದಿದ್ದರೆ ಆ ಉದ್ಯೋಗಗಳನ್ನು ನಡೆಸುವದೆಂದರೆ ಬಡವರ ಪರಿಶ್ರಮದ ಅಯೋಗ್ಯ ಲಾಭ ತೆಗೆದುಕೊಂಡಂತೆ ಆಗುವದೆಂದು ಹೇಳಬೇಕಾಗುವದು.

೬ ಪರಿಶ್ರಮ ಮಾಡುವವರಿಗೆ ಹೊಟ್ಟೆಗೆ ಸಾಕಾಗುವಷ್ಟು ಪ್ರತಿಫಲವು ಮುಟ್ಟಿತು, ಇಷ್ಟನ್ನು ಮಾತ್ರ ನೋಡಿ ಖಾದೀ ಕೆಲಸಗಾರರು ಸಂತೋಷ ಪಡಕೂಡದು. ಅವರು ಪ್ರತಿಯೊಬ್ಬ ಕೂಲಿಕಾರನ ಜೀವನದಲ್ಲಿ ಪ್ರವೇಶಿಸಬೇಕು ಮತ್ತು ಅವನು ತನ್ನ ಧಂದೆಯಲ್ಲಿ ಕುಶಲ ಶಿಲ್ಪಿಯಾಗಿರುವಂತೆ, ತನ್ನ ಗಳಿಕೆಯನ್ನು ಯೋಗ್ಯ ರೀತಿಯಿಂದ ವೆಚ್ಚ ಮಾಡುವಂತೆ ನೋಡಿಕೊಳ್ಳತಕ್ಕದ್ದು.

೭ ಖಾದಿಯ ವಿಷಯವಾಗಿ ಸೂಚಿಸಲ್ಪಟ್ಟ ಈ ಕೆಳಗಿನ ನಿಯಮಗಳು ಎಲ್ಲ ಗ್ರಾಮೋದ್ಯೋಗಗಳಿಗೂ ಅನ್ವಯಿಸಬಲ್ಲವು.

೧) ಪ್ರತಿಯೊಬ್ಬ ಕಾರ್ಯಕರ್ತನು ಹತ್ತಿ ಬಿಡಿಸುವದನ್ನು ಮೊದಲುಗೊಂಡು ನೇಯಿಗೆ ವರೆಗಿನ ಎಲ್ಲ ಕೆಲಸಗಳನ್ನೂ ಸರಿಯಾಗಿ ಅರಿತವನಿರಬೇಕು. ಎಂದರೆ ಮಾತ್ರ ಅವನು ಅನ್ಯರಿಗೆ ಕಲಿಸಬಲ್ಲನು.

೨) ವ್ಯವಸ್ಥಾಪಕರು ತಮ್ಮ ತಮ್ಮ ಕ್ಷೇತ್ರದಲ್ಲಿ ಕೆಲಸ ಮಾಡುವ ಪಿಂಜಾರರು, ನೂಲುವವರು, ನೇಯುವವರು ಮುಂತಾದವರ ಪಟ್ಟಿಯನ್ನು ಇಡತಕ್ಕದ್ದು.

೩) ನೂಲುವವನು ಯಾವ ಜಾತಿಯ ಹತ್ತಿಯನ್ನು ಉಪಯೋಗಿಸುವ

ನೆಂಬುವದನ್ನೂ ತಿಳಿದುಕೊಂಡು ಆ ಹತ್ತಿಯಿಂದ ಎಷ್ಟು ನಂಬರಿನ ನೂಲು ಹೊರಡಬಲ್ಲದೊ ಅದಕ್ಕಿಂತಲೂ ಹೆಚ್ಚು ನಂಬರಿನ ನೂಲನ್ನು ಅವನು ನೂಲದಂತೆ ಎಚ್ಚರಪಡತಕ್ಕದ್ದು.

೪) ಒಂದು ವೇಳೆ ನೀವು ನಿಮ್ಮ ನಿಮ್ಮ ಮನೆಯಲ್ಲಿ ಖಾದಿಯನ್ನು ಉಪಯೋಗಿಸದಿದ್ದರೆ ನಿಮಗೆ ಕೆಲಸವು ಸಿಕ್ಕಲಾರದೆಂದು ನೂಲುವವರಿಗೂ ಖಾದಿಯ ಹುಟ್ಟುವಳಿಗೆ ಸಹಾಯ ಮಾಡುವಂಥ ಶಿಲ್ಪಿಗಳಿಗೂ ಸ್ಪಷ್ಟವಾಗಿ ಹೇಳಿಬಿಡತಕ್ಕದ್ದು.

೫) ಈ ಎಚ್ಚರಿಕೆಯ ಜೊತೆಯಲ್ಲಿಯೆ ಅವರಿಗೆ ಅವರ ಕೂಲಿಯ ಬದಲಾಗಿಯೆ ಖಾದಿಯು ದೊರೆಯುವಂತೆ ಕೂಡ ಅನುಕೂಲತೆಯನ್ನು ಮಾಡಿಕೊಡತಕ್ಕದ್ದು.

೬) ಖಾದೀ ಕಾರ್ಯಾಲಯಕ್ಕೆ ಬರುವ ನೂಲಿನ ಪ್ರತಿಯೊಂದು ಪಟ್ಟಿಯ ಗಟ್ಟಿತನ ಮತ್ತು ಸಮಾನತೆಯನ್ನು ಪರೀಕ್ಷಿಸತಕ್ಕದ್ದು. ಯಾವ ಪ್ರಕಾರ ಅಪಕ್ವ ರೊಟ್ಟಿಯು ತಿನ್ನಲು ಅಯೋಗ್ಯವೊ ಹಾಗೆಯೆ ಗಟ್ಟಿಯಿಲ್ಲದ ಮತ್ತು ಸಮಾನವಿಲ್ಲದ ನೂಲು ಸ್ವೀಕರಿಸಲು ಅಯೋಗ್ಯವು.

೭) ಸಾಮಾನ್ಯತಃ ಪ್ರತಿಯೊಬ್ಬನ ನೂಲನ್ನು ಪ್ರತ್ಯೇಕವಾಗಿ ಇಡತಕ್ಕದ್ದು. ಅದು ಒಂದು ಬಟ್ಟೆಯನ್ನು ನೇಯುವಷ್ಟು ಒಟ್ಟಾಯಿತೆಂದರೆ ಅದನ್ನು ಪ್ರತ್ಯೇಕವಾಗಿಯೆ ನೇಯಿಸತಕ್ಕದ್ದು. ಇದರಿಂದ ಖಾದಿಯು ತಾಳಿಕೆಯುಳ್ಳದ್ದಾಗುವದು ಮತ್ತು ಅದರ ನೇಯಿಗೆಯೂ ಸೌಂದರ್ಯವೂ ಸುಧಾರಿಸುವದು.

೮) ಈ ರೀತಿ ಸಿದ್ಧವಾದ ಪ್ರತಿಯೊಂದು ಥಾನಿನ ಮೇಲೆ ಹತ್ತಿಕಾಳು ತೆಗೆಯುವವನ, ಹಿಂಜುವವನ, ನೂಲುವವನ ಮತ್ತು ನೇಯುವವನ ಹೆಸರುಗಳ ಚೀಟಿಯೊಂದನ್ನು ಅಂಟಿಸತಕ್ಕದ್ದು.

೯) ಶಿಲ್ಪಿಗಳು ಪರಿವಾರವುಳ್ಳವರು ಇದ್ದಲ್ಲಿ ಖಾದೀ ಹುಟ್ಟುವಳಿಯ ಸರ್ವ ಕಾರ್ಯಗಳನ್ನು ತಮ್ಮ ಪರಿವಾರಗಳಲ್ಲಿಯೆ ಮಾಡಿಕೊಳ್ಳಲು ತಿಳಿಸತಕ್ಕದ್ದು ಮತ್ತು ಅವರಿಗೆ ಉತ್ತೇಜನ ಕೊಡತಕ್ಕದ್ದು. ಕೂಲಿಯನ್ನು ಸಮಾನ ಮಾಡಿಬಿಟ್ಟರೆ ಎಲ್ಲವೂ ಸರಳವಾಗುವದು.

೧೦) ಶಿಲ್ಪಿಗಳ ಜೀವನಕ್ಕೆ ತಗಲುವ ವೆಚ್ಚವೆಷ್ಟು ಮತ್ತು ಅವರ ಆದಾಯವೆಷ್ಟು ಎಂಬದನ್ನು ತಿಳಿದುಕೊಳ್ಳಬೇಕು, ಅದರ ಅಭ್ಯಾಸ

ಮಾಡಬೇಕು. ತನ್ನ ಆದಾಯದ ಸದ್ವಿನಿಯೋಗವನ್ನು ಸದಸದ್ವಿವೇಕದಿಂದ ಮಾಡುತ್ತಿರುವವನಿಗೆ ಸಹಾಯ ಮಾಡಬೇಕು.

೧೧) ಯಾವದಾದರೂ ಪ್ರಸಂಗದಲ್ಲಿ ಗಿರಾಕಿಗಳ ಸಂಖ್ಯೆಯು ಕಡಿಮೆಯಾಗಿ ಸಂಘದ ಕೈಕೆಳಗೆ ಕೆಲಸ ಮಾಡುವ ಶಿಲ್ಪಿಗಳ ಸಂಖ್ಯೆಯನ್ನು ಕಡಿಮೆ ಮಾಡಬೇಕಾದ ಸಮಯವು ಬಂದರೆ, ಯಾವ ಶಿಲ್ಪಿಯು ಅನ್ಯ ಉದ್ಯೋಗಗಳಿಂದ ಹೊಟ್ಟೆ ತುಂಬಿಕೊಳ್ಳಬಲ್ಲನೊ ಅವನಿಗೆ ಮೊದಲು ರಜೆಯನ್ನು ಕೊಡತಕ್ಕದ್ದು. ಕೆಲವು ಪ್ರಾಂತಗಳಲ್ಲಿ ಕೇವಲ ಉಪಜೀವನಕ್ಕಾಗಿಯೆ ನೂಲುವವರು ನೂಲುತ್ತಾರೆ, ಉಳಿದವರು ನೂಲುವದಿಲ್ಲ, ಎಂಬುವಂತಹ ಪರಿಸ್ಥಿತಿಯೇನೂ ಸದ್ಯಕ್ಕೆ ಇಲ್ಲ. ಸ್ವಲ್ಪ ಹಾಗೂ ಹೀಗೂ ಮಾಡಿ ಎರಡು ದುಡ್ಡು ಸಂಗ್ರಹಿಸಿ ಸಣ್ಣಪುಟ್ಟ ಪದಾರ್ಥಗಳನ್ನು ಕೊಳ್ಳಬೇಕೆಂಬ ಸ್ತ್ರೀಯರು ಕೂಡ ನೂಲುತ್ತಾರೆಂದು ನನ್ನ ಗ್ರಹಿಕೆ. ಇಂಥವರು ಇದರಿಂದಲೆ ಒಳ್ಳೆ ಆಹಾರವನ್ನು ದೊರಕಿಸಬೇಕು ಅಥವಾ ತಮ್ಮ ಸಾಲವನ್ನು ಹರಿಯಬೇಕು ಎಂಬ ವಿಚಾರವನ್ನೆ ಮಾಡುವದಿಲ್ಲ.

೧೨) ಪ್ರತಿಯೊಂದು ಕಡೆಯಲ್ಲಿ ಕಾರ್ಯಕರ್ತರು ಹಂಜೀ ಮಾಡುವ ಸಾಧನಗಳನ್ನೂ ರಾಟೆಯನ್ನೂ ಕೂಲಂಕಷವಾಗಿ ಪರೀಕ್ಷಿಸತಕ್ಕದ್ದು. ವಿಶೇಷತಃ ಕದರು ಸಾಕಷ್ಟು ಸುತ್ತು ಚೆನ್ನಾಗಿ ತಿರುಗುತ್ತದೊ ಇಲ್ಲವೊ ನೋಡತಕ್ಕದ್ದು. ಏಕೆಂದರೆ ಕದರು ಸರಿಯಾಗಿಲ್ಲದಿದ್ದರೆ ಸರಿಯಾಗಿ ನೂಲು ಬರದು. ಆದರೂ ಅವನಿಗೆ ಎಷ್ಟು ನೂತರೂ ಅಷ್ಟೇ ಕೊಡಬೇಕು ಅಥವಾ ಬೇಕಾದವನು ಬೇಕಾದಷ್ಟು ನೂತರೂ ಅವನಿಗೆ ಹೆಚ್ಚು ದರವನ್ನು ಕೊಡಬೇಕೆಂದು ಯಾರೂ ಅರ್ಥ ಮಾಡಿಕೊಳ್ಳಕೂಡದು. ನಿಶ್ಚಿತ ಸಮಯದಲ್ಲಿ ಯಾರು ಹೆಚ್ಚು ಗಜ ಮತ್ತು ಹೆಚ್ಚು ಸಮನಾದ ನೂಲನ್ನು ತೆಗೆಯುವರೊ ಅವರಿಗೆ ಹೆಚ್ಚು ಕೂಲಿಯು ದೊರೆಯತಕ್ಕದ್ದು ಯೋಗ್ಯವಾದುದು. ನೂಲುವವನು ಮತ್ತು ನೂಲುವವಳು ತನ್ನ ನೂಲುವ ರೀತಿಯಲ್ಲಿ ಸುಧಾರಣೆಯನ್ನು ಮಾಡಿಕೊಳ್ಳದಿದ್ದರೆ ಅವರಿಗೆ ಹೆಚ್ಚಿನ ಕೂಲಿ ದೊರೆಯುವ ಸಂಭವವಿಲ್ಲ.

೧೩) ಮೇಲೆ ಹೇಳಿದ ಮಾತುಗಳಿಂದ ಸಿದ್ಧವಾಗುವದೇನಂದರೆ ಚರಖಾ ಸಂಘವು ಹೊಸ ರಾಟೆ, ಹೊಸ ಕದರು ಮುಂತಾದ ಎಲ್ಲ ಸಾಧನಗಳನ್ನು ಪ್ರಾರಂಭದಲ್ಲಿ ಅಗ್ಗವಾಗಿ ಪೂರೈಸತಕ್ಕದ್ದು. ಎಷ್ಟೋ ಕಡೆಯಲ್ಲಿ ರಾಟೆಯು

ಕದರು ಮುಂತಾದವುಗಳಲ್ಲಿ ಸುಧಾರಣೆ ಮಾಡಿದರೆ ಸಾಕು, ನೂಲು ತಾನಾಗಿಯೆ ಸುಧಾರಿಸುವದು.

## ೭ ನೂಲುವದು ಒಂದು ಯಜ್ಞಕಾರ್ಯ

೧ ತನ್ನ ಆರ್ಥಿಕ ಲಾಭದ ಕಡೆಗೆ ಲಕ್ಷಿಸದೆ ಬಡವರ ಉಪಯೋಗಕ್ಕಾಗಿ ನೂಲುವದು ಯಜ್ಞಕಾರ್ಯವೆನಿಸುವದು.

೨ ಬಡವರ ಮತ್ತು ದೇಶದ ಹಿತವನ್ನು ಬಯಸುವವರು ದಿನಾಲು ನೂಲುವ ಯಜ್ಞಕಾರ್ಯವನ್ನು ಮಾಡತಕ್ಕದ್ದು.

೩ ಹೀಗೆ ಮಾಡುವದರಿಂದ ಅಲ್ಪವಾದರೂ ಆರ್ಥಿಕ ಲಾಭವನ್ನು ಪಡೆಯಬೇಕೆನ್ನುವ ಬಡವರೂ ನೂಲುವದಕ್ಕಾರಂಭಿಸುವರು.

೪ ಉತ್ಪಾದಕ ಶ್ರಮವನ್ನು ಮಾಡದೆ ನಾನಾ ವಸ್ತುಗಳ ಉಪಭೋಗವನ್ನು ಮಾಡುವಂಥ ನಮಗೆ ಈ ರೀತಿ ಉತ್ಪಾದಕ ಶ್ರಮದ ಮಹಿಮೆಯು ತಿಳಿಯುವದು ಮತ್ತು ನಾವು ಅದಕ್ಕೋಸ್ಕರವಾಗಿ ಸ್ವಲ್ಪಿಲ್ಲ ಸ್ವಲ್ಪವಾದರೂ ಶ್ರಮವನ್ನು ಮಾಡಲಾರಂಭಿಸುವೆವು.

೫ ಈ ತೆರನಾಗಿ ಶ್ರೀಮಂತರೂ ಬಡವರೂ ಒಂದೇ ತರದ ಶ್ರಮದಲ್ಲಿ ಸಮಾನ ಪಾಲುಗಾರರಾಗಿ ಒಬ್ಬರು ಇನ್ನೊಬ್ಬರೊಡನೆ ಬಳಿಕೆಯಿಟ್ಟಿಡಲು ಆರಂಭಿಸುವರು.

೬ ನಾವು ರಾಟೆಯನ್ನು ಬಿಟ್ಟುಕೊಟ್ಟು ಪರದೇಶೀ ವಸ್ತ್ರಗಳನ್ನು ಉಪಯೋಗಿಸುವ ಪಾಪವನ್ನು ಮಾಡಿದ್ದಕ್ಕೆ ನೂಲುವ ಯಜ್ಞಕಾರ್ಯವನ್ನು ಮಾಡುವದೆ ಪ್ರಾಯಶ್ಚಿತ್ತವೆನಿಸುವದು.

೭ ಆದ್ದರಿಂದ ನೂಲುವದು ಇಂದು ಕೇವಲ ಸ್ತ್ರೀಯರ ಕರ್ತವ್ಯವಾಗಿರದೆ ಬಾಲಕರ ಮತ್ತು ಪುರುಷರ ಕರ್ತವ್ಯವೂ ಆಗಿರುವದು.

೮ ತಮಗೆ ಬೇಕಾಗುವ ನೂಲನ್ನು ತಾವೆ ತೆಗೆಯುವವರು ತಮ್ಮ ಪೂರ್ತಿ ಹೊಣೆಯನ್ನು ಹೊತ್ತುಕೊಂಡು ಒಟ್ಟು ದೇಶಕ್ಕೆ ತಗಲುವ ಬಟ್ಟೆಯನ್ನು ಅಂಶತಃ ಹುಟ್ಟಿಸುವ ಕಾರ್ಯದಲ್ಲಿ ಸಹಾಯ ಮಾಡಿದಂತಾಗುವದು, ಎಂಬುದು ನಿಜ. ಆದರೆ ಈ ರೀತಿ ನೂಲುವದು ಯಜ್ಞಕಾರ್ಯವೆನಿಸುವದಿಲ್ಲ.

೯ ಈ ರೀತಿ ನೂಲುವದರಿಂದ ದೊರೆತ ಕೂಲಿಯ ದಾನವು ದೇಶಕ್ಕೆ

ದೊಡ್ಡ ಪ್ರಮಾಣದಲ್ಲಿ ದೊರೆತರೆ ಅದರಿಂದ ಕೂಲಿಯು ಖಾದಿಯು ಬಡವರ ಕೂಲಿಯೂ ಕಡಿಮೆಯಾಗದೆ ಅಗ್ಗವಾಗಬಲ್ಲದು.

**ಯಜ್ಞಾರ್ಥ ನೂಲುವದು :**

ಕಾಂಗ್ರೆಸ್ಸಿನ ನಾಲ್ಕಾಣೆ ಸಭಾಸದರೆಲ್ಲರೂ ಯಜ್ಞಾರ್ಥ ನೂತು ಕಾಂಗ್ರೆಸ ಸಂಸ್ಥೆಗೆ ವರುಷಕ್ಕೆ ೧೨೦೦೦ ಗಜ ನೂಲು ದಾನವಾಗಿ ಕೊಟ್ಟರೆ ಎಷ್ಟು ಲಾಭವಾಗುವದು ಹಾಗೂ ರಾಷ್ಟ್ರದ ಖಾದೀ ಉದ್ಯೋಗದ ಮೇಲೆ ಅದರ ಪರಿಣಾಮವೇನಾಗುವದು ಎಂಬದನ್ನು ಶ್ರೀ. ಕೃಷ್ಣದಾಸ ಗಾಂಧಿ ಇವರು ಈ ಕೆಳಗಿನಂತೆ ವಿವರಿಸಿದ್ದಾರೆ:

೧) ಪ್ರಾಥಮಿಕ ಸಭಾಸದರ ಸಂಖ್ಯೆ : ೪೦ ಲಕ್ಷ.

೨) ಪ್ರತಿ ಸಭಾಸದನು ತಿಂಗಳಿಗೆ ಒಂದು ಸಾವಿರ ಗಜದಂತೆ ವರ್ಷಕ್ಕೆ ೧೨೦೦೦ ಗಜ ಕೊಟ್ಟರೆ ಅದರ ಸರಾಸರಿ ಬೆಲೆ ರೂ. ೪೦ ಲಕ್ಷ.

೩) ಆ ನೂಲಿನಿಂದ ಆದ ಖಾದೀ ಬಟ್ಟೆಯ ಬೆಲೆ ರೂ. ೪೮ ಲಕ್ಷ. ಸನ್ ೧೯೩೯ ಚರಖಾ ಸಂಘದ ಖಾದೀ ಮಾರಾಟ ರೂ. ೭೫ ಲಕ್ಷ. ಇವೆರಡೂ ಕೂಡಿ ಒಟ್ಟು ಖಾದೀ ಮಾರಾಟ ರೂ. ೧೨೩ ಲಕ್ಷ. ಈ ಖಾದಿ ನಿರ್ಮಿಸಲು ಚರಖಾ ಸಂಘಕ್ಕೆ ವೆಚ್ಚ ರೂ. ೮೩ ಲಕ್ಷ. (ರೂ. ೧೨೩ ಲಕ್ಷ — ರೂ. ೪೦ ಲಕ್ಷ) ಅರ್ಥಾತ್ ಖಾದೀ ಉತ್ಪತ್ತಿಯಲ್ಲಿ ಹೆಚ್ಚಳ ಶೇಕಡಾ ೬೪ ಅಥವಾ ಖಾದೀ ಮಾರಾಟದ ದರದಲ್ಲಿ ಕಡಿಮೆ ಶೇಕಡಾ ೩೨·೫ ಅಥವಾ ದರ ಇಳಿಸದೆ ನೂಲುವವರಿಗೆ ಹೆಚ್ಚು ಕೂಲಿ ಕೊಟ್ಟರೆ ಅದು ಬಹುಶಃ ಹೆಚ್ಚು ಶೇಕಡಾ ೮೦ ರಿಂದ ೧೦೦.

೪) ಚರಖಾ ಸಂಘದ ನಿಯಮದಂತೆ ಸಭಾಸದನು ಹತ್ತಿಯ ಬೆಲೆ ವಜಾ ಮಾಡಿ (ಆ. ೫) ನೂಲನ್ನು ತಿರುಗಿ (ಆ. ೧೧ಕ್ಕೆ) ಕೊಳ್ಳಬಹುದು. ಹಾಗೆ ಎಲ್ಲರೂ ಮಾಡಿದ್ದಾದರೆ, ಚರಖಾ ಸಂಘಕ್ಕೆ ರೂ. ೨೭·೫ ಲಕ್ಷ. ಆ ಮೂಲಕ ಚರಖಾ ಸಂಘದ ಖಾದಿಯ ಮೂಲ ಬೆಲೆ ( ರೂ. ೭೫ - ರೂ. ೨೭·೫ ) ಆಗುವದು ರೂ. ೪೭·೫ ಲಕ್ಷ. ಈ ಮೂಲಕ ಚರಖಾ ಸಂಘವು ಮೇಲಿನ ಲೆಕ್ಕದಲ್ಲಿ ಹೇಳಿದ ಶೇಕಡಾ ೩೨·೫ರ ಬದಲು ಶೇಕಡಾ ೩೭ ರಂತೆ ಬೆಲೆ ಕಡಿಮೆ ಮಾಡಬಹುದು. ವರ್ಗಣಿ ಎಂದು ಕೊಟ್ಟ ನೂಲು ೪೦ ಲಕ್ಷ ರೂಪಾಯದ್ದು ಇದ್ದಪಕ್ಷದಲ್ಲಿ ಪ್ರತಿಯೊಬ್ಬ ಸಭಾಸದನು ನಿಜವಾಗಿ ಎಂಟೇ ಆಣೆ ಕೊಟ್ಟಂತಾಗುವದು. ಉಳಿದದ್ದು ಅವನ ಶ್ರಮದ

ಬೆಲೆ, ರೋಖ ಹಣವಲ್ಲ. ಈ ಎಂಟಾಣೆ ಅಂದರೆ ಹತ್ತಿಯ ಬೆಲೆ ಮತ್ತು ಹಿಂಜುವ ಕೂಲಿ ಮಾತ್ರ. ಅವನು ಸ್ವತಃ ಹಿಂಜಿ ಹಂಜೀ ಹಾಕುತ್ತಿದ್ದರೆ ಅವನ ಜೇಬಿನಿಂದ ರೋಖ ಎಂಟಾಣೆ ಸಹ ಹೋಗುವದಿಲ್ಲ. ನೂಲಿನ ನಂಬರು ಹೆಚ್ಚು ಇದ್ದ ಹಾಗೆಲ್ಲ ಹತ್ತಿ ಕಡಿಮೆ ಬೇಕಾಗುವದು ಹಾಗೂ ನೂಲುವ ಪರಿಶ್ರಮ ಹೆಚ್ಚು ಆಗುವದು.

ಪೂರ್ವಗ್ರಹಗಳನ್ನು ಬಿಟ್ಟು ವಿಚಾರ ಮಾಡುವವರಿಗೆ ಈ ಮೇಲಿನ ಮಾತುಗಳಲ್ಲಿ ಬೇಕಾದಷ್ಟು ಆಸ್ಪದವಿದೆ.

## ೮ ಖಾದೀ ಕಾರ್ಯ

೧ ಖಾದೀ ಉತ್ಪಾದನದ ಮತ್ತು ಮಾರಾಟದ ಕಾರ್ಯದಲ್ಲಿ ನೂರಾರು ಮಹತ್ವಾಕಾಂಕ್ಷೀ ತರುಣರು ತಮ್ಮ ಬುದ್ಧಿ, ವ್ಯವಸ್ಥಾಶಕ್ತಿ, ವ್ಯಾಪಾರ-ಕೌಶಲ್ಯ ಮತ್ತು ಶಾಸ್ತ್ರೀಯ ಜ್ಞಾನವನ್ನು ತೋರಿಸಲು ಸಾಕಷ್ಟು ಅವಕಾಶ ವಿದೆ. ಇದೊಂದೆ ಕಾರ್ಯವನ್ನು ಚನ್ನಾಗಿ ನಡೆಸಿ ತೋರಿಸಿದರೆ ಪ್ರಜರಲ್ಲಿ ಸ್ವರಾಜ್ಯವನ್ನೂ ನಡೆಸುವ ಶಕ್ತಿ ಇದೆಯೆಂದು ಸಿದ್ಧಮಾಡಿದಂತಾಗುವದು.

೨ ಖಾದೀ ಸೂರ್ಯನ ಸುತ್ತುಮುತ್ತಲು ಹಳ್ಳಿಯ ಉದ್ಯೋಗಗಳು ಗ್ರಹಗಳಂತೆ ಹೊಳೆಯಲಾರಂಭಿಸಬಹುದು ಹಾಗೂ ಈಗ ಬಲಾತ್ಕಾರದಿಂದ ನಿರುದ್ಯೋಗಿಗಳೂ ಸೋಮಾರಿಗಳೂ ಆದ ಪ್ರಜರ ಮನೆಗಳು ಆ ಉದ್ಯೋಗಗಳಿಂದಲೂ ಅದರಿಂದ ದೊರೆಯತಕ್ಕ ಉಪಜೀವನದಿಂದಲೂ ಶೋಭಿಸಲಾರಂಭಿಸುವವು.

೩ ಇಂದು ಈ ಕಾರ್ಯವು ಆತ್ಮಶುದ್ಧಿಯ ವಿಷಯದಲ್ಲಿ ಚನ್ನಾಗಿ ನೆರವಾಗುತ್ತಲಿರುವದು. ಈ ನಿಮಿತ್ತದಿಂದ ಕಾರ್ಯಕರ್ತರು ಹಳ್ಳಿಹಳ್ಳಿಗೆ ಸ್ವರಾ-ಜ್ಯದ ಮತ್ತು ಅದರ ಸಿದ್ಧತೆಗಾಗಿ ಪ್ರಜರನ್ನು ಅಣಿ ಮಾಡುವದಕ್ಕೋಸ್ಕರ ಮಾಡತಕ್ಕ ನಾನಾ ಕಾರ್ಯಕ್ರಮಗಳ (ಅಹಿಂಸೆ, ಮದ್ಯಪಾನನಿಷೇಧ, ಅಸ್ಪೃಶ್ಯತಾನಿವಾರಣ, ಸ್ವಚ್ಛತೆ, ಜಾತೀಯ ಐಕ್ಯ, ಮುಂತಾದವುಗಳ) ಸಂದೇಶವನ್ನು ಮುಟ್ಟಿಸುತ್ತಿದ್ದಾರೆ.

೪ ಖಾದೀ ಶಾಸ್ತ್ರವನ್ನು ಕುರಿತು ಸರ್ವವಿಧದ ಜ್ಞಾನವನ್ನು ಮಾಡಿಕೊಡುವಂಥ ಮತ್ತು ಅದರಲ್ಲಿ ಶೋಧಗಳನ್ನು ಮಾಡುವಂಥ ಒಂದು ವಿಭಾಗವು ಇರುವದು ಅಗತ್ಯವು.

## ದಶಮ ಖಂಡ

# ಸ್ವಚ್ಛತೆಯೂ ಆರೋಗ್ಯವೂ

## ೧ ಶಾರೀರಿಕ ಸ್ವಚ್ಛತೆ

೧ ಹಿಂದುಸ್ತಾನದ ಎಷ್ಟೋ ಜಾತಿಗಳು ಶಾರೀರಿಕ ಸ್ವಚ್ಛತೆಯ ಕಡೆಗೆ ಸಾಕಷ್ಟು ಗಮನ ಕೊಟ್ಟಿರುವವು. ಆದರೆ ಇನ್ನೂ ಸಾಮಾನ್ಯ ಜನತೆಯಲ್ಲಿ ಈ ಬಗ್ಗೆ ಸಾಕಷ್ಟು ಕೆಲಸ ಮಾಡಬೇಕಾಗಿದೆ.

೨ ಉಚ್ಚ ಜಾತಿಯ ಜನರು ತಮ್ಮ ಮಕ್ಕಳ ಸ್ವಚ್ಛತೆಯ ಕಡೆಗೆ ಮಾತ್ರ ತೀರ ಸ್ವಲ್ಪ ಲಕ್ಷ್ಯಗೊಟ್ಟಿರುವರು. ಮಕ್ಕಳು ತಾವೇ ಸ್ವಚ್ಛವಾಗಿರುವ ಶಕ್ತಿಯನ್ನು ಸಂಪಾದಿಸಿಕೊಳ್ಳುವ ಪೂರ್ವದಲ್ಲಿ ತಂದೆ-ತಾಯಂದಿರು ತಮ್ಮ ಮಕ್ಕಳ ಸ್ವಚ್ಛತೆಯ ಕಡೆಗೆ ಸಾಕಷ್ಟು ಲಕ್ಷ್ಯಗೊಡುವಂತೆ ಕಂಡುಬರುವದಿಲ್ಲ.

೩ ಜಳಕ ಮಾಡುವದು ಹಿಂದೂ ಧರ್ಮದ ಒಂದು ಅಂಗವೆಂದು ಅನೇಕ ಹಿಂದೂ ಜನರು ಒಪ್ಪುತ್ತಾರೆ, ಆದರೆ ಎಲ್ಲ ಹಿಂದುಗಳು ಹಾಗೆ ಒಪ್ಪುತ್ತಾರೆಂದು ಹೇಳಲಿಕ್ಕಾಗುವದಿಲ್ಲ. ಹಿಂದುಸ್ತಾನದಲ್ಲಿ ಇತರ ಜಾತಿಗಳಲ್ಲಿ ದಿನಂಪ್ರತಿ ಸ್ನಾನ ಮಾಡುವ ಅಭ್ಯಾಸವಿಲ್ಲ. ಹಿಂದುಸ್ತಾನದ ಹವಾಮಾನದ ದೃಷ್ಟಿಯಿಂದ ಸ್ವಚ್ಛತೆ ಮತ್ತು ಆರೋಗ್ಯವನ್ನು ಕಾಯ್ದುಕೊಳ್ಳುವದಕ್ಕಾಗಿ ದಿನಾಲು ಜಳಕ ಮಾಡುವದು ಅಗತ್ಯವಾದದ್ದು.

೪ ಒಂದೆರಡು ತಂಬಿಗೆ ನೀರು ಸುರಿವಿಕೊಂಡು ಮೈ ಹಸಿಮಾಡಿಕೊಳ್ಳುವದು ಸ್ನಾನವೆನಿಸುವದಿಲ್ಲ. ಎಷ್ಟೋ ಜನರು ಇದೇ ರೀತಿ ಸ್ನಾನ ಮಾಡುತ್ತಾರೆ. ಶರೀರದ ಮೇಲಿನ ಹೊಲಸನ್ನು ನೀರಿನಿಂದ ಚನ್ನಾಗಿ ತೊಳೆದು ಚರ್ಮಛಿದ್ರಗಳನ್ನು ತೆರೆಯುವದೆ ಸ್ನಾನವೆನಿಸುವದು. ಆದ್ದರಿಂದ ಸ್ನಾನದ ನೀರು ಕುಡಿಯುವ ನೀರಿನಷ್ಟೆ ಜಳಜಳ ಇರತಕ್ಕದ್ದು. ಹಸನಾದ ನೀರು ಸಾಕಷ್ಟು ದೊರೆಯದಿದ್ದರೆ ಹೊಲಸು ನೀರಿನಿಂದ ಮೀಯುವದಕ್ಕಿಂತ ಸ್ವಚ್ಛ ನೀರಿನಲ್ಲಿ ಬಟ್ಟೆಯನ್ನು ತೋಯಿಸಿ ಅದರಿಂದ ಮೈಯನ್ನು ಚನ್ನಾಗಿ ತಿಕ್ಕಿಕೊಳ್ಳುವದು ಲೇಸು. ನಮ್ಮ ದೇಶದ ಚಿಕ್ಕ ಹಳ್ಳಿಗಳಲ್ಲಿಯೂ ದೊಡ್ಡ ಊರುಗಳಲ್ಲಿಯೂ ಸ್ನಾನದ ನೀರು ಸ್ನಾನಕ್ಕೆ ಯೋಗ್ಯವಾಗುವಷ್ಟು ಸ್ವಚ್ಛ ಇರುವದೆಂದು ಹೇಳಲಾಗುವದಿಲ್ಲ.

೫ ಕಣ್ಣು, ಕಿವಿ, ಮೂಗು, ಹಲ್ಲು, ಉಗುರು, ಕಂಕುಳ ಮುಂತಾದ ಸಂದುಗಳಲ್ಲಿ ಆಗಾಗ್ಗೆ ಉಂಟಾಗುತ್ತಿರುವ ಹೊಲಸನ್ನು ತೆಗೆದುಹಾಕುವದರ ಕಡೆಗೆ ಬಹು ಜನರ ಲಕ್ಷ್ಯವು ಹೋಗುವದಿಲ್ಲ. ವಿಶೇಷತಃ ಚಿಕ್ಕಮಕ್ಕಳ ಈ ಅಂಗಗಳ ಸ್ವಚ್ಛತೆಯ ಕಡೆಗೆ ಹಿರಿಯರು ಲಕ್ಷ್ಯಗೊಡುವದಿಲ್ಲ. ಮಕ್ಕಳ ಕಣ್ಣು ಮೂಗಿನಲ್ಲಿನ ಹೊಲಸನ್ನು ದಿನಾಲು ನಿರ್ಮಲ ನೀರುಬಟ್ಟೆಯಿಂದ ಸ್ವಚ್ಛ ಮಾಡುವದಿಲ್ಲ, ಆದ್ದರಿಂದಲೆ ಕಣ್ಣುಬೇನೆಯು ಬರುತ್ತದೆ. ಈ ಅಂಗಗಳನ್ನು ಸ್ವಚ್ಛವಾಗಿಡುವ ಅಭ್ಯಾಸವೂ ಹೊಲಸಿನ ಬಗ್ಗೆ ತಿರಸ್ಕಾರವೂ ನಮ್ಮ ಜನಗಳಲ್ಲಿ ಇಲ್ಲವೆನ್ನುವದು ಒಡೆದುಕಾಣುತ್ತದೆ. ಆದ್ದರಿಂದ ಇದು ಗ್ರಾಮ ಸೇವಕರೂ ಶಿಕ್ಷಕರೂ ಹೆಚ್ಚು ಗಮನಕೊಡತಕ್ಕಂಥ ವಿಷಯವಾಗಿದೆ.

೬ ಬಟ್ಟೆಗಳ ಸ್ವಚ್ಛತೆಯೂ ಶಾರೀರಿಕ ಸ್ವಚ್ಛತೆಯ ಒಂದು ಅಂಗವು. ಬಟ್ಟೆಗಳ ಅಸ್ವಚ್ಛತೆಗೆ ಬಡತನವು ಕಾರಣವಲ್ಲವೆಂದು ಹೇಳಬಹುದು. ಉತ್ತಮ ರೂಢಿಗಳ ಅಭಾವದಿಂದಲೂ ಆಲಸ್ಯದಿಂದಲೂ ಬಟ್ಟೆಗಳಲ್ಲಿ ಕೊಳೆಯು ಸೇರಿಕೊಳ್ಳುತ್ತದೆ.

೭ ತೇಪೆ ಹಚ್ಚಿ ಹೊಲಿದ ಬಟ್ಟೆಗಳಿಂದ ಮನುಷ್ಯನ ಬಡತನವು ಪ್ರಕಟವಾಗುವದಿಲ್ಲ. ಅದಕ್ಕೋಸುಗ ನಾವು ನಾಚಬೇಕಾಗಿಯೂ ಇಲ್ಲ. ಪಟುಭಟರಿಗೆ ಗಾಯುಗಳು ಹೇಗೋ ಹಾಗೆ ಬಡವರಿಗೆ ತೇಪೆಗಳು ಭೂಷಣಗಳು. ಆದರೆ ಬಟ್ಟೆಗಳನ್ನು ಹೊಲಸು ಹೊಲಸಾಗಿಡುವದು, ಅವು ಹರಿದಿದ್ದರೆ ಅವನ್ನು ಹೊಲಿಯದೆ ಇರುವದು ಮನುಷ್ಯನ ಬಡತನವನ್ನೂ ಆಲಸ್ಯವನ್ನೂ ಬಯಲಿಗೆಳೆಯುವವು. ಇದು ನಾಚಿಕೆಪಡುವಂಥ ಮಾತಾಗಿದೆ.

೮ ಸ್ವಚ್ಛ ಬಟ್ಟೆಗಳು ಹಾಲಿನಷ್ಟು ಬೆಳ್ಳಗಿರಬೇಕೆಂದು ತಿಳಿಯತಕ್ಕದ್ದಲ್ಲ. ಶಾರೀರಿಕ ಶ್ರಮ, ಕೂಲಿ ಮಾಡುವಂಥ ಬಡಜನರು ಸುಣ್ಣದ ಹಾಗೆ ತಮ್ಮ ಬಟ್ಟೆಗಳನ್ನಿಡಲಾರರು. ಆದರೆ ಅವರು ತಮ್ಮ ಬಟ್ಟೆಗಳನ್ನು ನಿರ್ಮಲ ನೀರಿನಲ್ಲಿ ತೊಳೆದುಕೊಳ್ಳುವದು, ಆಗಾಗ್ಗೆ ಸಬಕಾರ ಅಂಟಳಕಾಯಿ ಮುಂತಾದ ಪದಾರ್ಥಗಳಿಂದ ಸ್ವಚ್ಛ ಮಾಡಿಕೊಳ್ಳುವದು, ಕುದಿಯುವ ನೀರಿನಲ್ಲಿ ಎದ್ದಿ ಒಗೆದುಕೊಂಡು ಜಂತುರಹಿತ ಮಾಡಿಕೊಳ್ಳುವದು ಅಗತ್ಯವಾದದ್ದು.

೯ ತೊಟ್ಟ ಬಟ್ಟೆಯಿಂದಲೆ ಮೂಗು, ಕೈ ಮುಂತಾದವುಗಳನ್ನು ಉಜ್ಜುವದು ಮತ್ತು ರೊಟ್ಟಿ ಮೊದಲಾದ ಪದಾರ್ಥಗಳನ್ನು ಕಟ್ಟಿಕೊಂಡು ಒಯ್ಯುವದು ಅತ್ಯಂತ ಹೇಸಿ ಚಟವು. ಧರಿಸಿದ ಬಟ್ಟೆಯ ಹೊರತು ಬೇರೆ ಬಟ್ಟೆಯ

ಇಲ್ಲದವರು ಹಳೆಯ ವಸ್ತ್ರಗಳಿಂದ ಕರವಸ್ತ್ರಗಳನ್ನೂ ಅಂಗವಸ್ತ್ರಗಳನ್ನೂ ಮಾಡಿಕೊಂಡು ಅವನ್ನು ಮೇಲಿನ ಕಾರ್ಯಕ್ಕಾಗಿ ಉಪಯೋಗಿಸತಕ್ಕದ್ದು. ಇದಕ್ಕೆ ಶ್ರಮವೂ ಬೇಕಾಗುವದಿಲ್ಲ, ಹೆಚ್ಚು ವೆಚ್ಚವೂ ತಗಲುವದಿಲ್ಲ. ಧರಿಸಿದ ಬಟ್ಟೆಗಳೂ ಸ್ವಚ್ಛವಾಗಿ ಉಳಿಯುವವು ಮತ್ತು ಈ ಚಿಕ್ಕ ವಸ್ತ್ರಗಳನ್ನು ಸ್ವಚ್ಛವಿಡುವದೂ ಸುಲಭವಾಗುವದು.

## ೨ ಸುಂದರ ಮತ್ತು ಸ್ವಚ್ಛ ರೂಢಿಗಳು

೧ ಶಾರೀರಿಕ ಸ್ವಚ್ಛತೆಯ ಅಭ್ಯಾಸವಲ್ಲದೆ ಇನ್ನೂ ಕೆಲವು ಸಂಸ್ಕಾರಿ ಸುಂದರ ಮತ್ತು ಸ್ವಚ್ಛವಾದ ಅಭ್ಯಾಸಗಳನ್ನು ಇಟ್ಟುಕೊಳ್ಳುವದು ಅವಶ್ಯವಿದೆ. ಇವಿಲ್ಲದ್ದರಿಂದ ನಮ್ಮನ್ನು ನೋಡಿ ಒಳ್ಳೆಯ ಅಭ್ಯಾಸಗಳಿದ್ದ ಜನರು ಹೇಸಿಕೊಳ್ಳುವರು. ನಮ್ಮ ಬಗ್ಗೆ ಅವರಲ್ಲಿ ತಿರಸ್ಕಾರವು ಹುಟ್ಟುವದು.

೨ ಹೊಲಸನ್ನು ಎಂದೂ ಸಹಿಸದಂಥ ಶಿಕ್ಷಣವನ್ನು ನಾವು ನಮ್ಮ ಕಣ್ಣುಗಳಿಗೆ ಕೊಡತಕ್ಕದ್ದು. ಹೊಲಸನ್ನು ಕಂಡ ಕೂಡಲೆ ಹೊಲಸಾದ ಸ್ಥಳವನ್ನು ಬಿಟ್ಟು ಓಡಿಹೋಗಬೇಕೆಂದು ಇದರ ಅರ್ಥವಲ್ಲ. ಆ ಸ್ಥಳವನ್ನು ಸ್ವಚ್ಛವಾಗಿಡಲು ಯತ್ನಿಸಬೇಕೆಂಬುದೆ ಈ ಮಾತಿನ ತಾತ್ಪರ್ಯ.

೩ ಸುಂದರ ರೂಢಿಗಳನ್ನಿಟ್ಟುಕೊಂಡ ಮನುಷ್ಯನು ತಾನು ಕುಳಿತುಕೊಳ್ಳುವ ಸ್ಥಳವನ್ನು ಸ್ವಚ್ಛ ಮಾಡದೆ ಕುಳಿತುಕೊಳ್ಳುವದಿಲ್ಲ. ಕೂತಾಗ ಹೊಲಸು ಬಿದ್ದಿದ್ದರೆ ಎದ್ದ ಮೇಲೂ ಆ ಸ್ಥಳವನ್ನು ಸ್ವಚ್ಛ ಮಾಡುವನು. ಅವನು ಮನಬಂದತ್ತ ಕಾಗದಗಳನ್ನು ಹರಿದು ಚಲ್ಲುವದಿಲ್ಲ; ಅಲ್ಲಿ-ಇಲ್ಲಿ ಉಗುಳುವದಿಲ್ಲ; ದಂತಧಾವನದ ಕಡ್ಡಿಗಳನ್ನೂ ಬೀಡಿಯ ತುಣುಕುಗಳನ್ನೂ ಉಪಯೋಗಿಸಿದ ಬೆಂಕಿ ಕಡ್ಡಿಯ ಚೂರುಗಳನ್ನೂ ಇದೇ ಬಗೆಯ ಪದಾರ್ಥಗಳನ್ನೂ ಕೈ ಹೋದತ್ತ ಎಸೆಯುವದಿಲ್ಲ; ಆದರೆ ಇವುಗಳ ಸಲುವಾಗಿ ಪ್ರತ್ಯೇಕ ಒಂದು ಬುಟ್ಟಿಯನ್ನಾಗಲಿ ಪಾತ್ರೆಯನ್ನಾಗಲಿ ಒಂದೆಡೆಯಲ್ಲಿ ಇಟ್ಟು ಅವುಗಳಲ್ಲಿಯೆ ಎಸೆಯುವನು. ಸುಂದರ ಮತ್ತು ಸ್ವಚ್ಛ ಅಭ್ಯಾಸಗಳುಳ್ಳವರಾಗಬೇಕಾದರೆ ಕೆಳಗಿನ ನಿಯಮಗಳನ್ನು ಪಾಲಿಸತಕ್ಕದ್ದು :

೪ ನೀರು ತೆಗೆದುಕೊಳ್ಳದೆ ಮಲಮೂತ್ರ-ವಿಸರ್ಜನೆಗೆ ಹೋಗಕೂಡದು.

೫ ಮಲವಿಸರ್ಜನೆಗೆ ಮಾಡಿ ಬಂದ ಬಳಿಕ ಕೈಕಾಲುಗಳನ್ನು ಚನ್ನಾಗಿ ತೊಳೆದುಕೊಳ್ಳತಕ್ಕದ್ದು. ಮತ್ತು ತಂಬಿಗೆಯನ್ನು ತಿಕ್ಕಿ ತೊಳೆದಿಡತಕ್ಕದ್ದು.

೬ ಕುಡಿಯುವ ನೀರಿನಲ್ಲಿ ಎದ್ದಲು ಪ್ರತ್ಯೇಕ ಪಾತ್ರೆ ಇರತಕ್ಕದ್ದು. ಎಂಜಲ ಪಾತ್ರೆಯನ್ನು ಎಂದೂ ಎದ್ದಕೂಡದು. ಕುಡಿಯುವ ಪಾತ್ರೆಗೆ ನೀರು ಸಿಡಿಯುವಂತೆ ಅಥವಾ ಅದರ ಮೇಲೆ ನೀರು ಬೀಳುವಂತೆ ಅದರ ಬಳಿ ನಿಂತು ನೀರು ಕುಡಿಯತಕ್ಕದ್ದಲ್ಲ.

೭ ಬಹಳ ಜನರು ನೀರು ಕುಡಿಯುವದಕ್ಕಾಗಿ ಒಂದೇ ಪಾತ್ರೆಯು ಇದ್ದ ಕಡೆಯಲ್ಲಿ ಅದನ್ನು ಕಚ್ಚಿ ನೀರು ಕುಡಿಯುವದು ಅಯೋಗ್ಯವು. ಪಾತ್ರೆಯನ್ನು ಕಚ್ಚದೆ ನೀರು ಕುಡಿಯುವ ಅಭ್ಯಾಸವನ್ನಿಡತಕ್ಕದ್ದು, ಕಚ್ಚಿ ಕುಡಿಯುವ ಅಭ್ಯಾಸವಿದ್ದವರು ತಮಗಾಗಿ ಒಂದು ಪಾತ್ರೆಯನ್ನು ಪ್ರತ್ಯೇಕದಲ್ಲಿಟ್ಟುಕೊಳ್ಳತಕ್ಕದ್ದು ಇಲ್ಲವೆ ಬೊಗಸೆಯಿಂದ ನೀರು ಕುಡಿಯತಕ್ಕದ್ದು.

೮ ಊಟ ಮಾಡಿದ ಸ್ಥಾನದಲ್ಲಿ ಮುಸುರೆಯ ಪದಾರ್ಥಗಳು ಹರವಿದ್ದರೆ ಅವನ್ನು ತೆಗೆದು ಆ ಸ್ಥಾನವನ್ನು ಗೋಮಯದಿಂದ ಸಾರಿಸಬೇಕು; ಆ ಸ್ಥಾನವು ಮನೆಯ ಹೊರಗೆ ಇದ್ದರೆ ಚನ್ನಾಗಿ ಗೂಡಿಸಿ ನೀರು ಚಿಮುಕಿಸಬೇಕು. ಹೀಗೆ ಮಾಡುವ ಮೊದಲು ಆ ಸ್ಥಳದಲ್ಲಿ ಅಡ್ಡಾಡುವದು, ಅಡ್ಡಾಡಿ ಪಾದ ಪ್ರಕ್ಷಾಲನ ಮಾಡಿಕೊಳ್ಳದೆ ಸ್ವಚ್ಛವಾದ ಕೋಣೆಗಳಲ್ಲಿ ಪ್ರವೇಶಿಸುವದು, ಆ ಸ್ಥಾನಗಳಲ್ಲಿ ಬೇರೆಯವರಿಗೆ ಊಟಕ್ಕೆ ಹಾಕುವದು ಲೇಸಲ್ಲ.

೯ ಸಾಮಾನ್ಯವಾಗಿ ಸವಟು ಮತ್ತು ಚಮಚೆಯಿಂದಲೆ ಊಟಕ್ಕೆ ಬಡಿಸತಕ್ಕದ್ದು. ಕಾಯಿಪಲ್ಲೆ, ಬೇಳೆ, ಅನ್ನ ಮುಂತಾದ ಪದಾರ್ಥಗಳನ್ನು ಕೈಯಿಂದ ಬಡಿಸುವದು ಯೋಗ್ಯವಲ್ಲ. ಎಂಜಲ ಕೈಯಿಂದ ಊಟಕ್ಕೆ ನೀಡುವದಂತೂ ತೀರ ಅಯೋಗ್ಯವು. ರೊಟ್ಟಿ ಅಥವಾ ಪುರಿಯಂಥ ಒಣ ಮತ್ತು ಕರಿದ ಪದಾರ್ಥಗಳನ್ನೂ ಎಂಜಲ ಕೈಯಿಂದ ಕೊಡತಕ್ಕದ್ದಲ್ಲ.

೧೦ ಉಣ್ಣುವವನ ತಟ್ಟೆ ಮತ್ತು ಬಟ್ಟಲಕ್ಕೆ ತಾಕುವಂತೆ ಬಡಿಸುವದು ಅಸ್ವಚ್ಛತೆಯ ಚಿನ್ಹವು ಮತ್ತು ತಾಕುವದೆಂಬ ಭಯದಿಂದ ಉಣ್ಣುವ ತಟ್ಟೆಯಲ್ಲಿ ಪದಾರ್ಥಗಳನ್ನು ಮೇಲಿನಿಂದ ಚಲ್ಲುವದು ಅಸಭ್ಯತನವು.

೧೧ ಹೊಲಸುಗಾಲಿನಿಂದ ಹೋಗಿ ತನ್ನ ಹಾಸಿಗೆಯ ಮೇಲೆ ಕುಳಿತುಕೊಳ್ಳಕೂಡದು. ಜನರು ಮಲಗುವ ಸ್ಥಾನದಲ್ಲಿ ಯಾರ ಹಾಸಿಗೆಯ ಮೇಲೂ ಕಾಲು ಬೀಳದಂತೆ ಎಚ್ಚರದಿಂದ ಬರತಕ್ಕದ್ದು.

೧೨ ದುಡಿದು ಬಂದ ಮೇಲೂ ಮೂತ್ರವಿಸರ್ಜನೆ ಮಾಡಿ ಬಂದ ಮೇಲೂ ಕೈಕಾಲು ತೊಳೆದುಕೊಳ್ಳದೆ ಖಾದ್ಯ ಪದಾರ್ಥಗಳನ್ನು ಮುಟ್ಟಕೂಡದು.

ಕುಡಿಯುವ ನೀರಿನಲ್ಲಿ ಕೈ ಎದ್ದ ಕೂಡದು. ತಾಂಬೂಲ, ತಂಬಾಕು, ಬೀಡಿಯ ವ್ಯಸನಿಗಳು ಇತ್ತ ಹೆಚ್ಚು ಗಮನಕೊಡತಕ್ಕದ್ದು. ಆಗಾಗ್ಗೆ ತುರಿಸಿಕೊಳ್ಳುವ, ಮೂಗಿನೊಳಗಿನ ಹೊಲಸನ್ನು ತೆಗೆದುಕೊಳ್ಳುವ ಚಟವಿದ್ದವರು ಕೈ ತೊಳೆದು ಕೊಳ್ಳದೆ ತಿಂಡಿಯ ಪದಾರ್ಥಗಳನ್ನು ಮುಟ್ಟತಕ್ಕದ್ದಲ್ಲ.

೧೩ ಬಟ್ಟೆಗಳನ್ನು ಸ್ವಚ್ಛಮಾಡುವದಕ್ಕಾಗಿ ಉಪಯೋಗಿಸಿದ ಬಕೀಟನ್ನು ಚನ್ನಾಗಿ ತಿಕ್ಕಿ ತೊಳೆಯದೆ ಬಾವಿಯಲ್ಲಿ ಬಿಡಬಾರದು; ಅದರಲ್ಲಿ ಕುಡಿಯುವ ಹಾಗೂ ಅಡಿಗೆ ಮಾಡುವ ನೀರನ್ನು ತುಂಬಬಾರದು.

೧೪ ಲಘುಶಂಕೆ, ಬಾಯಿಮುಕ್ಕಳಿಸುವಿಕೆ, ಉಗುಳುವಿಕೆ, ಮುಂತಾದವುಗಳಿಗಾಗಿ ಬಚ್ಚಲ ಹರಿಗಳನ್ನು ಉಪಯೋಗಿಸುವ ವಾಡಿಕೆಯು ತೀರ ಹೊಲಸಾದದ್ದು, ಇಂಥ ಹರಿಗಳನ್ನು ಮನೆಯಲ್ಲಿ ಮಾಡಿಸದಿರುವದೆ ಇಷ್ಟವಾದದ್ದು. ಮೇಲಿನ ಕಾರ್ಯಗಳಿಗಾಗಿ ಪ್ರತ್ಯೇಕವಾಗಿ ಒಂದು ಪಾತ್ರೆಯನ್ನು ಉಪಯೋಗಿಸಬೇಕು. ಮತ್ತು ಹೊಲಸನ್ನು ದೂರ ಒಯ್ದು ಚಲ್ಲಿ ಅದನ್ನು ಸ್ವಚ್ಛಮಾಡಿ ಇಡುವದು ಅತ್ಯಂತ ಸುಂದರವಾದ ನಡತೆಯು. ಕಾಲುವೆ (ಗಟಾರು)ಗಳು ಇಲ್ಲದ ಊರುಗಳಲ್ಲಿ ಹರಿಗಳನ್ನು ಉಪಯೋಗಿಸಕೂಡದು.

೧೫ ಆದರೆ ಎಲ್ಲಿ ಬಚ್ಚಲಹರಿಗಳನ್ನೇ ಉಪಯೋಗಿಸುವದು ಅವಶ್ಯವಿದೆಯೊ ಅಲ್ಲಿ ಹರಿಗಳಲ್ಲಿ ಮೂತ್ರವಿಸರ್ಜನೆ ಮಾಡಲು ಕುಳಿತುಕೊಳ್ಳುವವರು ಸಮೀಪದಲ್ಲಿ ಪಾತ್ರೆಗಳು ಬಿದ್ದಿದ್ದರೆ ಅವುಗಳಿಗೆ ಮೂತ್ರದ ಹನಿಗಳು ಸಿಡಿಯದಷ್ಟು ದೂರದಲ್ಲಿ ಅವನ್ನಿಡತಕ್ಕದ್ದು. ಅವುಗಳಿಗೆ ಹನಿಗಳು ಸಿಡಿಯುವ ಹಾಗೆ ಕೈ ತೊಳೆದುಕೊಳ್ಳತಕ್ಕದ್ದಲ್ಲ ಮತ್ತು ಬಾಯಿ ಮುಕ್ಕಳಿಸತಕ್ಕದ್ದಲ್ಲ.

೧೬ ತಾನು ಧರಿಸಿದ ಬಟ್ಟೆಗಳನ್ನು ಸ್ವಚ್ಛಮಾಡದೆ ಬೇರೆಯವರಿಗೆ ಅವನ್ನು ಧರಿಸಲು ಯಾರೂ ಕೊಡಕೂಡದು.

೧೭ ಬಾಯಿಂದ ಅವಾಚ್ಯ ಶಬ್ದಗಳನ್ನೂ ಬೈಗುಳಗಳನ್ನೂ ಉಚ್ಚರಿಸುವದು ಕೂಡ ಶಾರೀರಿಕ ಅಸ್ವಚ್ಛತೆಯೆನಿಸುವದು. ಪರಮಾತ್ಮನ ನಾಮೋಚ್ಚಾರಣೆ ಮಾಡುವಂಥ ನಾಲಿಗೆಯಿಂದ ಕೆಟ್ಟ ಬೈಗಳನ್ನು ನುಡಿಯುವದು ಸ್ನಾನ ಮಾಡಿ ತಿಪ್ಪಿಯ ಮೇಲೆ ಮಲಗಿಕೊಳ್ಳುವದಕ್ಕಿಂತಲೂ ಮಲಿನವಾದುದು, ಹೇಯವಾದುದು, ಏಕೆಂದರೆ ನಾಲಿಗೆಯೊಡನೆ ಮನವೂ ಅಪವಿತ್ರವಾಗುವದು.

## ೩ ಬಾಹ್ಯ ಸ್ವಚ್ಛತೆ

೧ ಸ್ವಂತ ಶಾರೀರಿಕ ಸ್ವಚ್ಛತೆಯ ಬಗ್ಗೆ ಉಚ್ಚ ವರ್ಗಗಳಿಗೆ ಪ್ರಮಾಣ ಪತ್ರವನ್ನು ಕೊಟ್ಟರೂ ಕೊಡಬಹುದು, ಆದರೆ ಮನೆ, ಅಂಗಳ, ಹರಿ, ಓಣಿ, ಮಾರ್ಗ ಮೊದಲಾದವುಗಳ ಸ್ವಚ್ಛತೆಯ ಬಗ್ಗೆ ಕೊಡಲಾಗುವದಿಲ್ಲ. ಈ ವಿಷಯದಲ್ಲಿ ಇನ್ನೂ ದಲಿತವರ್ಗಗಳಿಗೆ ಹಲವು ಮಟ್ಟಿಗೆ ಪ್ರಮಾಣ ಪತ್ರಗಳನ್ನು ಸಲ್ಲಿಸಬಹುದು. ಒಟ್ಟಾರೆ ಸರ್ವರೂ ತಮ್ಮ ಜೀವನದಲ್ಲಿ ಈ ಬಗ್ಗೆ ಸುಧಾರಣೆ ಮಾಡಿಕೊಳ್ಳುವದು ಅವಶ್ಯವಾದದ್ದು.

೨ ಅಲ್ಲಿ ಇಲ್ಲಿ ಉಗುಳುವದು, ಮಲಮೂತ್ರ ವಿಸರ್ಜಿಸುವದು, ಕಸ ಚಲ್ಲುವದು, ಅದು ಒಂದೆಡೆ ಕೂಡಿಬೀಳುವಂತೆ ಮಾಡುವದು ಹಿಂದೀಯರಿಗೆ ಅಭ್ಯಾಸವಾಗಿಬಿಟ್ಟಿದೆ. ಈ ಅಭ್ಯಾಸದಿಂದ ಹಿಂದುಸ್ತಾನದ ಹಳ್ಳಿಗಳು, ಪಟ್ಟಣಗಳು, ತೀರ್ಥಕ್ಷೇತ್ರಗಳು, ಮಾರ್ಗಗಳು, ಕೆರೆ-ಕಾಲುವೆಗಳು, ಹೊಳೆ ಹಳ್ಳಗಳು, ಧರ್ಮಶಾಲೆಗಳು, ಉಗಿಬಂಡಿಗಳು, ಸ್ಟೀಮರುಗಳು ಮುಂತಾದವು ಕಲಂಕಿತವಾಗಿವೆ.

೩ ಈ ನಡವಳಿಕೆಯ ಮೂಲದಲ್ಲಿ ಒಂದು ಬಗೆಯ ಅಸ್ಪೃಶ್ಯತೆಯ ಕಲ್ಪನೆ ಇದೆ. ಮನುಷ್ಯನಿದ್ದ ಕಡೆಯಲ್ಲೆಲ್ಲ ಹೊಲಸು ಉಂಟಾಗತಕ್ಕದ್ದೆ. ಆದರೂ ಹಿಂದುಸ್ತಾನದ ಸ್ಪೃಶ್ಯ ವರ್ಗಗಳು ಸ್ವತಃ ಹೊಲಸನ್ನು ದೂರ ಮಾಡುವದು ಕೀಳೆಂದು ಭಾವಿಸಿ, ಈ ಪರೋಪಕಾರಿ ಕೆಲಸ ಮಾಡುವವರು ಅಸ್ಪೃಶ್ಯರು, ಎಂದೆಣಿಸಿ ಹೊಲಸನ್ನು ತೆಗೆಯುವದನ್ನು ಬಿಟ್ಟು ಕೂಡಿ ಬೀಳುವ ರೂಢಿಯನ್ನು ಆಚರಣೆಯಲ್ಲಿ ತಂದಿರುವವು ಮತ್ತು ಹೊಲಸನ್ನು ದೂರ ಮಾಡುವ ಕಾರ್ಯದಲ್ಲಿ ನೆರವಾಗುವದನ್ನೂ ಬಿಟ್ಟಿರುವವು. ಇದರಿಂದ ಅಸ್ಪೃಶ್ಯರು ಎಷ್ಟು ದುಡಿದರೂ ತೀರದಷ್ಟು ಕಾರ್ಯವನ್ನು ಅವರ ಮೇಲೆ ಸ್ಪೃಶ್ಯ ವರ್ಗಗಳು ಹಾಕಿದಂತಾಗಿದೆ. ಆದ್ದರಿಂದಲೆ ಇಂದು ರಾಷ್ಟ್ರದಲ್ಲಿ ನಾನಾ ತರದ ರೋಗಗಳೂ ಉಪದ್ರವಗಳೂ ಉದ್ಭವಿಸಿರುವವು ಮತ್ತು ಉಪಯುಕ್ತ ಸ್ಥಾನಗಳೆಲ್ಲ ಓಕರಿಕೆಯನ್ನುಂಟುಮಾಡುವಷ್ಟು ಹೊಲಸಾಗಿರುವವು.

೪ ಮೇಲೆ ವರ್ಣಿಸಲ್ಪಟ್ಟ ಸ್ಥಳಗಳಲ್ಲಿ ಉಗುಳುವದು, ಮಲಮೂತ್ರ ವಿಸರ್ಜಿಸುವದು ಮತ್ತು ಕಸ ಚಲ್ಲುವದು ಮುಂತಾದ ಕಾರ್ಯಗಳು ಪಾಪಮಯವೆಂದೂ ಅಪರಾಧಗಳೆಂದೂ ಎಣಿಸಲ್ಪಡತಕ್ಕದ್ದು.

೫ ತಾಂಬೂಲ ಮತ್ತು ತಂಬಾಕು ಸೇವನೆಯ ಚಟವಿಲ್ಲದ ನಿರೋಗೀ

ಮನುಷ್ಯನು ಹಲ್ಲುಜ್ಜುವಾಗ ಮಾತ್ರ ಉಗುಳಬೇಕಾಗುವದು, ಇತರ ಸಮಯದಲ್ಲಿ ಉಗುಳಬೇಕಾಗುವದಿಲ್ಲ. ಹಲ್ಲು, ಮೂಗು ಮತ್ತು ಪುಪ್ಪುಸದ ರೋಗಗಳಿದ್ದವರು ಆಗಾಗ್ಗೆ ಉಗುಳಬೇಕಾಗುವದು ಇಲ್ಲವೆ ಮೂಗು ಸ್ವಚ್ಛ ಮಾಡಿಕೊಳ್ಳಬೇಕಾಗುವದು. ನಿರೋಗಿಯಾಗಿ ಇದ್ದಾಗ್ಯೂ ತಾಂಬೂಲ ತಂಬಾಕು ಸೇವನೆಯ ಚಟವನ್ನಿಟ್ಟುಕೊಳ್ಳುವದೆಂದರೆ ರೋಗೀ ಮನುಷ್ಯನ ಕಷ್ಟಗಳನ್ನು ಅನುಭವಿಸಲು ಒಪ್ಪಿದಂತೆಯೆ ಸೈ. ಮನುಷ್ಯನ ಉಗುಳು ಮತ್ತು ಕಫದಲ್ಲಿ ನಾನಾ ಬಗೆಯ ವಿಷಗಳಿರುವವು. ಅವು ಹವೆಯಲ್ಲಿ ಬೆರೆತು ನಿರೋಗೀ ಮನುಷ್ಯರಲ್ಲಿಯೂ ಸೇರುವವು. ಆದ್ದರಿಂದ ಉಗುಳು ಮತ್ತು ಕಫವನ್ನು ನಾಶ ಮಾಡುವ ವ್ಯವಸ್ಥೆಯನ್ನು ಮಾಡತಕ್ಕದ್ದು.

೬ ಪ್ರತಿಯೊಂದು ಮನೆಯಲ್ಲಿ ಉಗುಳಲು ಬೂದಿಯಿಂದ ತುಂಬಿದ್ದೊಂದು ಪರಿವಾಣವನ್ನಿಡತಕ್ಕದ್ದು ಮತ್ತು ಅದರಲ್ಲಿಯೆ ಉಗುಳತಕ್ಕದ್ದು. ಆ ಪರಿವಾಣವನ್ನು ದಿನಾಲು ದೂರ ಒಯ್ದು ಚಲ್ಲಿ ಸ್ವಚ್ಛ ಮಾಡಿ ತಂದು ಪುನಃ ಅದರಲ್ಲಿ ಹಸನಾದ ಬೂದಿಯನ್ನು ತುಂಬಿ ಇಡತಕ್ಕದ್ದು. ಪೀಕದಾನಿಯನ್ನು ಉಪಯೋಗಿಸುತ್ತಿದ್ದರೆ ಸಿಕ್ಕಸಿಕ್ಕಲ್ಲಿ ಉಗುಳನ್ನು ಚಲ್ಲಿ ಸ್ವಚ್ಛ ಮಾಡತಕ್ಕದ್ದಲ್ಲ. ಮುಂಬಯಿಯಂಥ ದೊಡ್ಡ ಪಟ್ಟಣಗಳಲ್ಲಿ, ಗಟಾರುಗಳ ಸಂಪೂರ್ಣ ವ್ಯವಸ್ಥೆ ಇದ್ದ ಊರುಗಳಲ್ಲಿ ಉಗುಳನ್ನು ಗಟಾರದಲ್ಲಿ ಚಲ್ಲಿ ಪೀಕದಾನಿಯನ್ನು ಸ್ವಚ್ಛ ಮಾಡಬಹುದು. ಆದರೆ ಹಳ್ಳಿಗಳಲ್ಲಿ, ಗಟಾರುಗಳ ಸರಿಯಾದ ವ್ಯವಸ್ಥೆ ಇಲ್ಲದ ಊರುಗಳಲ್ಲಿ ದೂರದ ಹೊಲಗಳಿಗೆ ಹೋಗಿ ಅಲ್ಲಿ ಉಗುಳನ್ನು ಚಲ್ಲಿ ಅದರ ಮೇಲೆ ಒಣ ಮಣ್ಣು ಹಾಕತಕ್ಕದ್ದು. ಇಲ್ಲವೆ ಅದನ್ನು ಬಿಸಿಬಿಸಿ ಬೂದಿಯಲ್ಲಿ ಕಲಿಸಿ ಆ ಬೂದಿಯನ್ನು ದೂರ ಬಿಸುಟಿ ಬರತಕ್ಕದ್ದು.

## ೪ ಶೌಚ *

೧ ಮಾರ್ಗದಲ್ಲಿ ಮಲವಿಸರ್ಜನ ಮಾಡುವ ಅಭ್ಯಾಸವು ಎಳ್ಳಷ್ಟೂ ಇರತಕ್ಕದ್ದಲ್ಲ. ಮರೆಯಿಲ್ಲದ ಬಯಲು ಪ್ರದೇಶದಲ್ಲಿ ಸರ್ವರಿಗೂ ಕಾಣುವಂತೆ ಮಲತ್ಯಾಗ ಮಾಡುವದು ಮತ್ತು ಮಕ್ಕಳಿಂದ ಹಾಗೆ ಮಾಡಿಸುವದು ಅಸಭ್ಯತನವು.

---

* 'ಇದು ಮತ್ತು ಇದರ ಮುಂದಿನ ಕೆಲವು ಪ್ರಕರಣಗಳು ಗಾಂಧೀಜಿಯವರು ಬರೆದ 'ಗಾಮಡಾನೀ ವಹಾರೆ' ಎಂಬ ಪ್ರಕಟವಾದ ಲೇಖಮಾಲೆಯ ಆಧಾರದಿಂದ ಬರೆಯಲ್ಪಟ್ಟಿವೆ. ಈ ಲೇಖಮಾಲೆಯ ಪುಸ್ತಕವನ್ನು ಸರ್ವರೂ ಅವಶ್ಯವಾಗಿ ಓದಬೇಕು.

— ಕೆ. ಘ. ಮ.

೨ ಆದುದರಿಂದ ಪ್ರತಿಯೊಂದು ಹಳ್ಳಿಯಲ್ಲಿ ತಿಪ್ಪೆಯ ಹತ್ತರ ತೀರ ಕಡಿಮೆ ಕಿಮ್ಮತ್ತಿನಲ್ಲಿ ಒಂದು ಕಕ್ಕಸ ಕಟ್ಟಿಸತಕ್ಕದ್ದು. ಮತ್ತು ದಿನಾಲು ನಿಯಮಿತವಾಗಿ ಸ್ವಚ್ಛ ಮಾಡತಕ್ಕದ್ದು.

೩ 'ಬಯಲು' ಕಡೆಗೇ ಹೋಗುವದಿದ್ದಲ್ಲಿ ಊರಿನಿಂದ ಒಂದು ಮೈಲು ದೂರ ಜನರ ಸುಳಿದಾಟವಿಲ್ಲದ ಸ್ಥಾನಕ್ಕೆ ಹೋಗಬೇಕು. ಒಂದು ತಗ್ಗು ತೆಗೆದು ಅದರಲ್ಲಿ ಮಲತ್ಯಾಗ ಮಾಡಿ ಅದರ ಮೇಲೆ ಸಾಕಷ್ಟು ಮಣ್ಣು ಹಾಕಿ ಬರಬೇಕು. ಬುದ್ಧಿವಂತನಾದ ಒಕ್ಕಲಿಗನು ತನ್ನ ಹೊಲದಲ್ಲಿಯೆ ಒಂದು ಪಾಯಖಾನೆಯನ್ನು ಅಗ್ಗವಾಗಿ ಕಟ್ಟಿಸಿಕೊಂಡು ಅದರಲ್ಲಿಯೆ ಮಲವಿಸರ್ಜನೆ ಮಾಡಿ ಅದನ್ನು ಹೊಲದಲ್ಲಿ ಹುಗಿದು, ಮೇಲೆ ಮಣ್ಣುಹಾಕಿ ಪುಕ್ಕಟೆಯಿಂದ ಗೊಬ್ಬರವನ್ನು ಮಾಡಿಕೊಳ್ಳುವನು.

೪ ಇದಾದನಂತರ, ಬಾಲಕರು ಮತ್ತು ರೋಗಿಗಳು ಇವರ ಸಲುವಾಗಿಯೂ ಇಕ್ಕಟ್ಟಿನ ವೇಳೆಯಲ್ಲಿ ಉಪಯೋಗಿಸುವದಕ್ಕಾಗಿಯೂ ಮನೆಗೊಂದು ಕಕ್ಕಸವು ಬೇಕೇಬೇಕು. ಈ ಕಕ್ಕಸಗಳಲ್ಲಿ ಟಿನ್ನಿನ ಡಬ್ಬಿಗಳನ್ನು ಉಪಯೋಗಿಸಬಹುದು. ಇಲ್ಲಿಯೂ ಶೌಚಕ್ರಿಯೆಯು ತೀರಿದ ಮೇಲೆ ಮಲದ ಮೇಲೆ ಸಾಕಷ್ಟು ಮಣ್ಣು ಹಾಕತಕ್ಕದ್ದು. ಈ ಡಬ್ಬಿಯನ್ನು ದಿನಾಲು ಹೊಲಕ್ಕೊಯ್ದು ತಗ್ಗು ತೋಡಿ ಅದರಲ್ಲಿ ಸುರುವಿ ಸಾಕಷ್ಟು ಮಣ್ಣುಮುಚ್ಚಿ ಬರತಕ್ಕದ್ದು. ಡಬ್ಬಿಯಿಂದ ನಾತು ಬರದಂತೆ ತಿಕ್ಕಿತಿಕ್ಕಿ ಜಳಜಳ ಮಾಡಿ ಉಪಯೋಗಿಸತಕ್ಕದ್ದು.

೫ ಕಕ್ಕಸದಲ್ಲಿ ನೀರು ಮತ್ತು ಮೂತ್ರಗಳಿಗಾಗಿ ಬೇರೆ ಬೇರೆ ಡಬ್ಬಿಗಳನ್ನು ಇಟ್ಟಿರಬೇಕು. ಅವನ್ನು ಉಪಯೋಗಿಸುವವರು ಅತ್ತ ಇತ್ತ ಹಸಿಯಾಗದಂತೆ ಮೂತ್ರ ಮತ್ತು ನೀರು ಬೀಳದಂತೆ ಎಚ್ಚರಪಡತಕ್ಕದ್ದು.

೬ ಈಗಿನ ಶೌಚಕೂಪಗಳು ಅತ್ಯಂತ ನಿರುಪಯುಕ್ತವಾಗಿರುವವು. ಬಹಳ ಆಳವಾದ ಕೂಪದಲ್ಲಿ ಗೊಬ್ಬರ ಮಾಡುವ ಜಂತುಗಳು ಇರುವದಿಲ್ಲ. ಇಂಥ ಶೌಚಕೂಪಗಳಿಂದ ದುರ್ಗಂಧವು ಎದ್ದು ಹವೆಯನ್ನು ಕೆಡಿಸುವದು.

೭ ಬೀದಿಗಳಲ್ಲಿ ಲಘುಶಂಕೆ ಮಾಡುವದು ಪಾಪಕರ್ಮವೆಂದು ತಿಳಿಯತಕ್ಕದ್ದು. ಇದಕ್ಕೋಸ್ಕರವೂ ಮಣ್ಣಿನಿಂದ ತುಂಬಿದ ಡಬ್ಬಿಗಳನ್ನು ಇಡತಕ್ಕದ್ದು. ಅಂದರೆ ದುರ್ಗಂಧವು ಏಳಲಾರದು ಮತ್ತು ಹನಿಗಳು ಸಿಡಿಯಲಾರವು.

೮ ಪ್ರತಿಯೊಬ್ಬ ಮನುಷ್ಯನು ಕಕ್ಕಸ ಸ್ವಚ್ಛ ಮಾಡುವದನ್ನು ಕಲಿಯು ಬೇಕು. ಹಾಗೆ ಕಲಿತರೆ ಅಯೋಗ್ಯ ರೀತಿಯಿಂದ ಪಾಯಖಾನೆ ಉಪ ಯೋಗಿಸುವದರಿಂದ, ಡಬ್ಬಿಗಳನ್ನು ಸರಿಯಾಗಿ ಇಡದಿರುವದರಿಂದ ಎಷ್ಟು ಶ್ರಮಪಡಬೇಕಾಗುತ್ತದೆಂಬುದರ ಕಲ್ಪನೆಯು ಬರುವದು. ಭಂಗಿಯು ಸಮಾಜದ ಸೇವೆಯನ್ನು ಎಷ್ಟು ಮಾಡುತ್ತಿರುವನೆಂಬುದೂ ಗೊತ್ತಾಗುವದು. ಪುನಃ ಯೋಗ್ಯ ರೀತಿಯಿಂದ ಉಪಯೋಗಿಸಿದ ಪಾಯಖಾನೆಯನ್ನು ಸ್ವಚ್ಛ ಮಾಡುವದರಲ್ಲೇನೂ ಹೇಸಿಕೆ ಇಲ್ಲವೆಂದೂ ಭಂಗೀ ಜನರ ತೊಂದರೆಗಳ ಕಾರಣವು ಈ ಕಾರ್ಯದ ಹೊಲಸುತನವಲ್ಲ ಆದರೆ ಅದನ್ನು ಉಪಯೋಗಿಸು ವದರ ಕಡೆಗಿದ್ದ ನಮ್ಮ ದುರ್ಲಕ್ಷ್ಯವೆಂದೂ ಗೊತ್ತಾಗುವದು.

೯ ಮನುಷ್ಯನ ಮಲಮೂತ್ರದಂತೆಯೆ ದನಗಳ ಮಲಮೂತ್ರವನ್ನೂ ಗೊಬ್ಬರ ಮಾಡಿಕೊಂಡು ಉಪಯೋಗಿಸತಕ್ಕದ್ದು. ಸೆಗಣಿಯಿಂದ ಕುಳ್ಳು ಗಳನ್ನು ಮಾಡಿಕೊಳ್ಳುವದೆಂದರೆ ಕಾಗದದ ನಾಣ್ಯಗಳನ್ನು (ನೋಟುಗಳನ್ನು) ಸುಟ್ಟು ಕಾಸಿಕೊಂಡಂತೆಯೆ ಸರಿ ! ದನದ ಮೂತ್ರವು ಇನ್ನಾವ ಕೆಲಸಕ್ಕೂ ಉಪಯುಕ್ತವಾಗುವದಿಲ್ಲ. ಅದನ್ನು ಗೊಬ್ಬರದಂತೆ ಉಪಯೋಗಿಸದಿದ್ದರೆ ಆರ್ಥಿಕ ದೃಷ್ಟಿಯಿಂದಲೂ ಆರೋಗ್ಯದೃಷ್ಟಿಯಿಂದಲೂ ಹಾನಿಯಾಗುತ್ತದೆ.

## ೫ ಜಲಾಶಯುಗಳು

೧ ಕೆರೆ, ಬಾವಿ ಮತ್ತು ನದಿಗಳ ನೀರು ನಿರ್ಮಲವಿರಬೇಕು. ಇತ್ತಕಡೆ ಗ್ರಾಮಪಂಚಾಯತಿಗಳೂ ಗ್ರಾಮಸೇವಕರೂ ಚನ್ನಾಗಿ ಗಮನಕೊಡಬೇಕು.

೨ ಇಂದು ಜಲಾಶಯುಗಳ ಸ್ಥಿತಿಯು ಅತ್ಯಂತ ಶೋಚನೀಯವಾಗಿರು ವದು. ಜನರು ಕೆರೆಗಳಲ್ಲಿಯೆ ಪಾತ್ರೆಗಳನ್ನು ತೊಳೆಯುತ್ತಾರೆ, ಸ್ನಾನ ಮಾಡುತ್ತಾರೆ, ಬಟ್ಟೆಗಳನ್ನೂ ಒಗೆಯುತ್ತಾರೆ. ದನಗಳೂ ಅಲ್ಲಿಯೆ ತಮ್ಮ ಮೈ ತೊಳೆದುಕೊಳ್ಳುತ್ತವೆ, ನೀರು ಕುಡಿಯುತ್ತವೆ ಮತ್ತು ಬಿದ್ದುಕೊಂಡಿರು ತ್ತವೆ. ಹುಡುಗರೂ ಹಿರಿಯರೂ ಅವುಗಳಲ್ಲಿಯೆ ಮಲ ತೊಳೆದುಕೊಳ್ಳು ತ್ತಾರೆ. ಅವುಗಳ ಸುತ್ತುಮುತ್ತಲಿನ ನಿಕಟಪ್ರದೇಶದಲ್ಲಿ ಮಲತ್ಯಾಗ ಮಾಡು ತ್ತಾರೆ. ಅದೇ ನೀರನ್ನು ಕುಡಿಯಲೂ ಅಡಿಗೆ ಮಾಡಲೂ ಉಪಯೋಗಿಸು ತ್ತಾರೆ. ಇದೆಲ್ಲವೂ ಪಾಪವೆಂದು ತಿಳಿಯತಕ್ಕದ್ದು ಮತ್ತು ಇದನ್ನು ನಿಲ್ಲಿಸ ತಕ್ಕದ್ದು.

೩ ದನಗಳು ಪ್ರವೇಶಿಸದಂತೆ ಗ್ರಾಮದ ಕೆರೆಯನ್ನು ಕಟ್ಟಿಸಬೇಕು

ಹಾಗೂ ಬಾವಿಗಳ ಹತ್ತರ ಇರುವ ಡೋಣಿಯಂತೆ ಕೆರೆಯ ಹತ್ತರದಲ್ಲಿಯೂ ಕಟ್ಟಿಸಬೇಕು.

೪ ಇದೇ ರೀತಿ ಬಟ್ಟೆಗಳನ್ನು ಒಗೆಯುವದಕ್ಕೆ ಕೆರೆಯ ಬಳಿಯಲ್ಲಿಯೆ ಒಂದು ಹೌದು ಇರತಕ್ಕದ್ದು. ಒಗೆದ ನೀರು ಪುನಃ ಕೆರೆಯನ್ನು ಸೇರದ ಹಾಗೆ ಒಡ್ಡು ಕಟ್ಟಬೇಕು, ಅಲ್ಲದೆ ಆ ನೀರು ದೂರ ಹರಿದುಹೋಗುವಂತೆ ಮಾಡತಕ್ಕದ್ದು.

೫ ಈ ಡೋಣಿಯನ್ನು ಅಥವಾ ಟಂಕಿಯನ್ನು ದಿನಾಲು ಊರವರೆ ತಮ್ಮ ಕೈಯಿಂದ ತುಂಬಿದರೆ ಬಹಳ ಉತ್ತಮ; ಇಲ್ಲವಾದರೆ ಅವನ್ನು ಯಾರಿಗಾದರೂ ಸ್ವಲ್ಪ ಕೂಲಿ ಕೊಟ್ಟು ತುಂಬಿಸಬೇಕು.

೬ ಎಂಜಲ ಪಾತ್ರೆಗಳನ್ನು ಕೆರೆಯಲ್ಲಿ ಅಥವಾ ಹೊಕ್ಕುತುಂಬುವ ಬಾವಿಯಲ್ಲಿ ತೊಳೆಯಕೂಡದು, ಆದರೆ ಬಳಿಯಲ್ಲಿದ್ದ ಡೋಣಿಯ ಹತ್ತರ ತಿಕ್ಕಿ ತೊಳೆದ ಬಳಿಕ ಅವನ್ನು ಕೆರೆಯಲ್ಲಿ ಎದ್ದಬಹುದು.

೭ ನೀರು ತುಂಬುವವರು ಕೆರೆಯಲ್ಲಿ ಕಾಲಿಡದೆ ನೀರು ತುಂಬಿಕೊಳ್ಳಲು ಬರುವ ಹಾಗೆ ಕೆರೆಯಲ್ಲಿ ಏರ್ಪಾಡು ಮಾಡಿ ಇಡತಕ್ಕದ್ದು.

೮ ಯಾವ ಊರಲ್ಲಿ ಒಂದೇ ಕೆರೆ ಇರುವದೊ ಅದರಲ್ಲಿ ಯಾರೂ ಇಳಿದು ಸ್ನಾನವನ್ನು ಮಾಡಲೇಕೂಡದು. ಅನೇಕ ಕೆರೆಗಳು ಇದ್ದ ಊರುಗಳಲ್ಲಿ ಕುಡಿಯುವ ನೀರಿನ ಕೆರೆಯು ಪ್ರತ್ಯೇಕವಾಗಿರತಕ್ಕದ್ದು. ಎಂದರೆ ಕುಡಿಯುವದಕ್ಕಾಗಿ ಒಂದು ಕೆರೆಯು ಮೀಸಲಾಗಿರತಕ್ಕದ್ದು.

೯ ಬಾವಿಗಳನ್ನು ಆಗಾಗ್ಗೆ ಬಳಿಸಿ ಸ್ವಚ್ಛವಿಡತಕ್ಕದ್ದು. ಅವುಗಳ ಸುತ್ತಲೂ ಗೋಡೆಯು ಇರಬೇಕು ಮತ್ತು ಕೆಸರು ಆಗಗೊಡಬಾರದು. ಆದ್ದರಿಂದ ಆವಾರದ ಗೋಡೆಯು ಗಚ್ಚಿನದಿರಬೇಕು. ಬಾವಿಯ ಸುತ್ತಲೂ ಬಿದ್ದ ನೀರು ಅಲ್ಲಿಯೆ ಇಂಗದಂತೆ ವ್ಯವಸ್ಥೆ ಮಾಡಬೇಕು. ಕಾಲುವೆಗಳನ್ನು ಕಟ್ಟಿಸಿ ಅವುಗಳ ಮುಖಾಂತರ ನೀರು ದೂರ ಒಯ್ದು ಬಿಡಬೇಕು.

೧೦ ಈ ರೀತಿ ನೀರು ದೂರ ಹರಿದುಹೋಗುವದಕ್ಕಾಗಿ ಕಟ್ಟಿಸಲ್ಪಟ್ಟ ಮನೆಯ ಬಾವಿ ಮುಂತಾದವುಗಳ ಮುಂದಿನ ಕಾಲುವೆಗಳಲ್ಲಿ ಹಾವಸಿಗಟ್ಟುವದು, ಅದರಿಂದ ದುರ್ಗಂಧವು ಏಳುವದು, ಗುಂಗಾಡುಗಳು ಹೆಚ್ಚಾಗುವವು. ಆದ್ದರಿಂದ ಈ ಹರಿಗಳ ಸ್ವಚ್ಛತೆಯ ಕಡೆಗೆ ಹೆಚ್ಚು ಗಮನಕೊಡತಕ್ಕದ್ದು, ಬಿದಿರಿನ ಕಸಬರಿಗೆಗಳಿಂದ ಅವನ್ನು ದಿನಾಲು ತಿಕ್ಕಿ ತಿಕ್ಕಿ ತೊಳೆದು ಸ್ವಚ್ಛವಾಗಿಡತಕ್ಕದ್ದು.

## ೬ ರೋಗಗಳು

೧ ರೋಗ ಮತ್ತು ರೋಗದ ಬಾಹ್ಯ ಲಕ್ಷಣಗಳಲ್ಲಿಯ ಭೇದವನ್ನು ತಿಳಿದುಕೊಳ್ಳತಕ್ಕದ್ದು.

೨ ತಲೆನೋವು, ಜ್ವರ, ದಮ್ಮು ಇವು ರೋಗಗಳಲ್ಲ, ಆದರೆ ಇವು ದೇಹದಲ್ಲಿ ಉದ್ಭವಿಸಿದ ವಿಷಗಳ ಅಥವಾ ರೋಗಗಳ ಬಾಹ್ಯ ಪರಿಣಾಮಗಳು.

೩ ಪ್ರಾಣಿಯ ರಕ್ತದಲ್ಲಿ ಪರೋಪಕಾರಿ ಜಂತುಗಳಿರುವವು. ಅವು ಯಾವಾಗಲೂ ಶರೀರದಲ್ಲಿ ಹುಟ್ಟುವ ವಿಷಗಳನ್ನು ನಾಶ ಮಾಡಲು ಹೆಣಗುತ್ತಿರುವವು. ಈ ಹೆಣಗಾಟವೆ ಜ್ವರ ಮತ್ತು ದಮ್ಮಿನ ರೂಪದಲ್ಲಿ ಹೊರಗೆ ಗೋಚರವಾಗುವದು.

೪ ಯಾವುಗಳ ಕಾರಣದಿಂದ ಈ ವಿಷಗಳು ಹುಟ್ಟಿರುವವೊ ಅಥವಾ ಹುಟ್ಟುತ್ತಿರುವವೊ ಅವೇ ನಿಜವಾದ ರೋಗಗಳು, ಜ್ವರ ಮೊದಲಾದವು ಕೇವಲ ಬಾಹ್ಯಚಿನ್ಹಗಳು.

೫ ಬೀಳುವದು, ಪೆಟ್ಟು ತಗಲುವದು ಮುಂತಾದ ಆಕಸ್ಮಿಕ ಘಟನೆಗಳಿಂದ ಹುಟ್ಟಿದ ರೋಗಗಳನ್ನು ಬಿಟ್ಟರೆ ಉಳಿದ ಎಲ್ಲ ರೋಗಗಳ ಮೂಲ ಕಾರಣವು ಸಂಯಮರಹಿತ ಜೀವನವು ಎಂದು ಹೇಳಬಹುದು.

೬ ಊಟ-ಉಡಿಗೆ, ವಿಷಯೋಪಭೋಗ, ನಿದ್ರೆಜಾಗರಣೆ, ಆಲಸ್ಯ, ಅತಿಶ್ರಮ, ನಾಟಕ - ಸಿನೇಮಾದಿಗಳ ವಿಲಾಸ, ಕ್ರೋಧ, ದ್ವೇಷ, ರಾಗ ಮುಂತಾದ ಭಾವನೆಗಳ ಉದ್ವೇಗದಲ್ಲಿ ನಾವು ತೋರಿಸುತ್ತಿರುವ ಅಸಂಯಮವೆ ರೋಗಗಳ ಮುಖ್ಯ ಕಾರಣವು.

೭ ಈ ಅಸಂಯಮವು ಅನಿವಾರ್ಯವಾಗಿ ಅಜ್ಞಾನ, ವ್ಯಾಮರವು, ಇವುಗಳಿಂದ ಅಥವಾ ತಿಳಿದೂ ತಿಳಿದೂ ಆದರೂ ಇದರ ಪರಿಣಾಮದ ಫಲವಾದ ರೋಗಗಳನ್ನು ಶರೀರವು ಭೋಗಿಸಬೇಕಾಗುವದು.

೮ ಈ ಅಸಂಯಮದ ಕಾರಣಗಳಲ್ಲಿ ಹೊಲಸು ಹವೆ, ಹೊಲಸು ನೀರು, ಮತ್ತಾವುದಾದರೂ ಹೊಲಸು ಇವು ಕೂಡಿದರೆ ತೀರಿತು, ರೋಗವು ಹುಟ್ಟುವದು.

೯ ನಿರ್ಮಲ ಮತ್ತು ಸಂಯಮಪೂರ್ಣ ಜೀವನವನ್ನಿಟ್ಟುಕೊಂಡ ಮನುಷ್ಯನು ಅಂಟುರೋಗಿಗಳ ಮಧ್ಯದಲ್ಲಿದ್ದರೂ ಅವನಿಗೆ ರೋಗಗಳು ಅಂಟುವ

ದಿಲ್ಲವೆಂಬಂತೆ ತೋರುತ್ತದೆ. ಸಂಯಮೀ ಮನುಷ್ಯನ ರಕ್ತದಲ್ಲಿ ಹೊರಗಿನಿಂದ ಬರುವ ವಿಷಗಳನ್ನು ಹಿಂದಕ್ಕಟ್ಟುವ ಶಕ್ತಿಯು ಅಪಾರವಾಗಿರುತ್ತದೆಂಬುದು ಗೊತ್ತಾಗುವದು. ಆದರೆ ಅಸಂಯಮದಿಂದ **ಈ ಶಕ್ತಿಯು** ಕುಂದಿದ ಕೂಡಲೆ ಅಂಟುರೋಗಗಳು ಅಂಟಿಕೊಳ್ಳುವವು.

೧೦ ರೋಗದ ಕಾರಣಗಳನ್ನು ತಡೆದು ನಿಲ್ಲಿಸುವದೆ ಮೊದಲನೆಯ ಉಪಚಾರವು. ಈ ಉಪಚಾರಗಳಲ್ಲಿ ಮೊದಲನೆಯ ಉಪಚಾರವು ಇಂದ್ರಿಯಗಳ ಮತ್ತು ಮನಸ್ಸಿನ ಸಂಯಮವು. ಇದರ ಜೊತೆಯಲ್ಲಿ ನಿಯಮಿತವಾಗಿ ಸ್ವಚ್ಛ ಆಹಾರ-ವಿಹಾರ ಸೇವನೆಯೂ ಸಾಕಷ್ಟು ಪರಿಶ್ರಮ ಮತ್ತು ನಿದ್ರೆಯೂ ಆವಶ್ಯಕ; ಸ್ವಚ್ಛ ಹವೆ, ನಿರ್ಮಲ ನೀರು, ಹಸನಾದ ಬಟ್ಟೆ, ಮನೆ ಅಂಗಳ, ಬೀದಿಗಳ ಸ್ವಚ್ಛತೆ ಇವು ಎರಡನೆಯ ಉಪಚಾರವು.

## ೭ ಉಪಚಾರಗಳು

೧ ಮೈಯಲ್ಲಿ ಸರಿಯಾಗಿಲ್ಲವೆಂದು ಎನಿಸಿದ ಕೂಡಲೆ ರೋಗಗಳನ್ನು ತಡೆಯುವ ಉಪಾಯಗಳನ್ನು ಕೈಕೊಳ್ಳುವದು ಮೊದಲನೆಯ ಉಪಚಾರವು.

೨ ಈ ಉಪಚಾರವು ಸರಿಯಾಗಿ ಆದರೆ ವಿಶೇಷವಾಗಿ ರೋಗಗಳು ತಾನಾಗಿಯೆ ವಾಸಿಯಾಗುವವು. ಔಷಧ ಸೇವನೆಯು ಹೆಚ್ಚಾಗಿ ಹಾನಿಕರವೂ ವ್ಯರ್ಥವೂ ಆಗಿರುವದು.

೩ ಆಹಾರ-ವಿಹಾರದಲ್ಲಿನ ದೋಷಗಳನ್ನು ದೂರ ಮಾಡದೆ ಹವೆ, ನೀರು ಸುಧಾರಿಸಿಕೊಂಡು ರೋಗ ನಿವಾರಣೆ ಮಾಡಲು ಯತ್ನಿಸುವದು ಜಳಜಳವಾದ ನೀರಿನಿಂದ ಕೈ ತೊಳಕೊಂಡು ಹೊಲಸು ಬಟ್ಟೆಯಿಂದ ಕೈ ಒರಸಿಕೊಂಡಂತೆಯೆ ಸರಿ. ಆಹಾರ-ವಿಹಾರ, ಹವೆ-ನೀರು ಇವೆರಡರಲ್ಲಿಯೂ ಸುಧಾರಣೆ ಮಾಡದೆ ಔಷಧದಿಂದಲೆ ಗುಣಹೊಂದಲಿಚ್ಛಿಸುವದು ಹೊಲಸು ಬಟ್ಟೆಗೆ ಕಪ್ಪು ಬಣ್ಣ ಹಾಕಿ ಅದು ಶುಭ್ರವಾಗಿದೆ, ಸ್ವಚ್ಛವಾಗಿದೆಯೆಂದು ಕಲ್ಪಿಸಿಕೊಂಡಂತೆಯೆ ಸರಿ.

೪ ಔಷಧದ ಹೊರತು ಅನ್ಯ ಶಾಸ್ತ್ರೀಯ ಉಪಚಾರಗಳೂ ಉಂಟು. ಅವುಗಳ ಜ್ಞಾನವು ಪ್ರತಿಯೊಬ್ಬರಿಗೂ ಇರತಕ್ಕದ್ದು. ಇವು ಸರಳವಿರುವವಲ್ಲದೆ ಇವುಗಳನ್ನು ಮಾಡಲಿಕ್ಕೆ ಹಣ ವೆಚ್ಚ ಮಾಡಬೇಕಾದ್ದೇನೂ ಇಲ್ಲ.

೫ ಪ್ರತಿಯೊಂದು ಊರಲ್ಲಿ ಒಂದು ಔಷಧಾಲಯವು ಇರಲೇಬೇಕೆನ್ನುವ ಗ್ರಹಿಕೆಯು ತಪ್ಪಾದುದು. ಅನೇಕ ಊರುಗಳ ನಡುವೆ ಒಂದು ದವಾಖಾನೆ

ಇದ್ದರೆ ಸಾಕು. ಹಳ್ಳಿಯ ದವಾಖಾನೆಯೆಂದರೆ ಗ್ರಾಮಸೇವಕನು ಮಾಡುವ ಉಪಚಾರಗಳು ಎಂದು ತಿಳಿಯತಕ್ಕದ್ದು.

೬ ಉತ್ತಮ ಉಪಚಾರಗಳಲ್ಲಿ ಉಪವಾಸ, ಕಟಿಸ್ನಾನ ಮತ್ತು ಸೂರ್ಯಸ್ನಾನ ಇವು ಸರ್ವೋತ್ಕೃಷ್ಟವಾದವುಗಳು. ಇವುಗಳ ವಿಷಯವಾಗಿ ಬೇಕಾಗುವ ಜ್ಞಾನವನ್ನು ಸ್ವಯಂಸೇವಕರು ಪಡೆದುಕೊಳ್ಳತಕ್ಕದ್ದು. *

೭ ಸೋಸಿದ ಹಸಿಮಣ್ಣಿನ ಪೋಟೀಸಿನಿಂದಲೂ ಎಷ್ಟೋ ರೋಗಗಳು ಮತ್ತು ಜ್ವರಗಳು ವಾಸಿಯಾಗುವವು. ವಿಪರೀತ ಜ್ವರ, ತಲೆನೋವು, ಹೊಟ್ಟೆಕಿಬ್ಬೊಟ್ಟೆ ನೋವು, ಪೆಟ್ಟನಿಂದ ಇಲ್ಲವೆ ಮತ್ತಾವದಾದರೂ ಕಾರಣದಿಂದ ಉಂಟಾದ ಬಾವು, ಮೂಗಿನಶಿಂಬೆ ಒಡೆಯುವಿಕೆ, ತಿಂಡಿ, ಕಜ್ಜಿ ಮುಂತಾದ ಚರ್ಮರೋಗಗಳು, ಮಲಬದ್ಧತೆ, ನಿದ್ರೆ ಚನ್ನಾಗಿ ಬರದಿರುವಿಕೆ, ವಿಷಕಾರೀ ಜಂತುಗಳು ಕಚ್ಚುವಿಕೆ ಮುಂತಾದ ನೋವುಗಳ ಮೇಲೆ ಹರಳಿಲ್ಲದ ಸೂಸು ಮಣ್ಣಿನ ಪೋಟೀಸು ಹಾಕುವದು ರಾಮಬಾಣ ಉಪಚಾರವಾಗಿರುವದು. ಒಂದು ಪಟ್ಟಿಯು ಒಣಗಿದ ಮೇಲೆ ಮತ್ತೊಂದು ಪಟ್ಟಿಯನ್ನು ಕಟ್ಟತಕ್ಕದ್ದು.

೮ ಹುಣ್ಣುಗಳನ್ನು ಪಕ್ವಮಾಡಬೇಕಾದಲ್ಲಿ, ಶ್ವಾಸೋಚ್ಛ್ವಾಸದಲ್ಲಿ ತೊಂದರೆಯಾಗುತ್ತಿದ್ದರೆ, ದಣುವಿನಿಂದ ಮತ್ತು ಚಳಿಯಿಂದ ಚಳಿಚಳಿಯಾಗುತ್ತಿದ್ದರೆ ಬಿಸಿ ಬಿಸಿ ನೀರಿನಲ್ಲಿ ವಸ್ತ್ರವನ್ನು ಎದ್ದಿ ಅದನ್ನು ಹಿಂಡಿ ಚರ್ಮವು ಸುಡದಂತೆ ಕಾವು ಕೊಟ್ಟರೆ ಬಹಳ ಆರಾಮವೆನಿಸುವದು. ಉಸುಕು, ಮಣ್ಣು ಇಲ್ಲವೆ ಇಟ್ಟಂಗಿಯನ್ನು ಕಾಸಿ ಒಂದು ಬಟ್ಟೆಯಲ್ಲಿ ಸುತ್ತಿ ಅದರಿಂದಲೂ ಕಾವು ಕೊಡಬಹುದು.

೯ ಮನುಷ್ಯನು ಖಾಯಿಲೆ ಬೀಳುತ್ತಲೆ ಅವನ ಹಾಸಿಗೆಯನ್ನು ಉಳಿದ ಮನುಷ್ಯರ ಹಾಸಿಗೆಗಳಿಂದ ಬೇರೆ ಮಾಡಬೇಕು. ಅವನ ಸುತ್ತಲು ಸಾಮಾನುಗಳು ದಟ್ಟವಾಗಿ ಹರವಿದ್ದರೆ ಅವನ್ನು ದೂರಮಾಡಬೇಕು ಮತ್ತು ಹೆಚ್ಚು ಜನರನ್ನು ನೆರೆಯಗೊಡಬಾರದು. ಅವನಿಗೆ ಗಾಳಿಯು ಮತ್ತು ಬಿಸಿಲಿನ ತಾಪವು ತಟ್ಟದಂಥ ಮತ್ತು ಸಾಕಷ್ಟು ಹವೆಯು ಸಿಗುವಂಥ ಸ್ಥಳದಲ್ಲಿ ಅವನನ್ನು ಮಲಗಿಸಬೇಕು. ಅವನ ಬಟ್ಟೆ, ಮಗ್ಗಲಾಸಿಗೆ, ಹೊದ್ದುಕೊಳ್ಳುವ ವಸ್ತ್ರಗಳನ್ನು ಆಗಾಗ್ಗೆ ಒಗೆದು ಸ್ವಚ್ಛವಾಗಿಡಬೇಕು. ಹಾಸಿಗೆ, ಕಂಬಳಿ,

---

* ಈ ವಿಷಯವನ್ನು ಚರ್ಚಿಸಿದ ಗಾಂಧೀಜಿಯವರ "ಆರೋಗ್ಯ ರಕ್ಷಣೆ" ಎಂಬ ಪುಸ್ತಕದ ಅಧ್ಯಯನ ಮಾಡಬೇಕು.

ದಿಂಬು ಮುಂತಾದವುಗಳನ್ನು ಚುರುಚುರು ಬಿಸಿಲಿಗೆ ಆಗಾಗ್ಗೆ ಹಾಕಬೇಕು.

೧೦ ರೋಗಿಗೆ ಔಷಧ ಕೊಡುವದಕ್ಕಿಂತಲೂ ಅವನ ಶರೀರ, ಮನಸ್ಸು ಹಾಗೂ ಹೊಟ್ಟೆಗೆ ವಿಶ್ರಾಂತಿಯನ್ನು ಕೊಡುವದು ಹೆಚ್ಚು ಅವಶ್ಯವಾದುದು. ಆದರೆ ನಮ್ಮಲ್ಲಿ ಹೊಟ್ಟೆಯ ವಿಶ್ರಾಂತಿಯ ಕಡೆಗೆ ಹೆಚ್ಚು ಗಮನವು ಕೊಡಲ್ಪಡುವದಿಲ್ಲ.

೧೧ ಹೊಟ್ಟೆಯು ಕೆಡದೆ ಮನುಷ್ಯನಿಗೆ ಯಾವದೆ ರೋಗ ಬರುವದು ಬಹು ಅಪರೂಪ. ಹೊಟ್ಟೆಯು ಕೆಟ್ಟರೆ ರೋಗಬರುವದು ಹೆಚ್ಚು. ಆದ್ದರಿಂದ ಮೊಟ್ಟಮೊದಲು ರೋಗಿಯ ಹೊಟ್ಟೆಯನ್ನು ಹಗುರು ಮಾಡುವದು ಉಪಚಾರಕನ ಮೊದಲನೆಯ ಕರ್ತವ್ಯ. ಇದಕ್ಕಾಗಿ ಬಸ್ತಿ ( ಎನಿಮಾ ) ಕೊಡುವದು ಪ್ರಥಮೋಪಾಯವು. ಜ್ವರ ಜಾಸ್ತಿ ಇಲ್ಲದಿದ್ದರೆ ಒಂದೆರಡು ಸಲ ಜುಲಾಬು ಆಗುವಷ್ಟು ರೇಚಕ ಕೊಡಬಹುದು. ಇದರೊಡನೆಯೆ ರೋಗಿಯಿಂದ ಒಂದೆರಡು ಉಪವಾಸಗಳನ್ನು ಮಾಡಿಸಿದರೆ ಯಾವ ಹಾನಿಯೂ ಆಗುವದಿಲ್ಲ. ರೋಗಿಯು ಅತ್ಯಂತ ಅಶಕ್ತನಾಗಿದ್ದರೆ ಉಪವಾಸ ಮಾಡಿಸಬೇಕೊ ಮಾಡಿಸಬಾರದೊ ಎಂಬ ವಿಷಯದಲ್ಲಿ ಅನುಭವಿಗಳ ಸಲಹೆ ತೆಗೆದುಕೊಳ್ಳತಕ್ಕದ್ದು. ಇಂಥ ಸಲಹೆಗಾರರು ಇದ್ದರೂ ಸರಿ, ಇಲ್ಲದಿದ್ದರೂ ಸರಿ, ಇಷ್ಟು ಮಾತ್ರ ಯಾವಾಗಲೂ ಲಕ್ಷ್ಯದಲ್ಲಿಟ್ಟಿರತಕ್ಕದ್ದು : ರೋಗಿಯ ರಕ್ತವು ರೋಗದ ವಿಷಗಳೊಡನೆ ಹೋರಾಡುತ್ತಿರುವಾಗ ಅನ್ನ ಪಚನ ಮಾಡುವ ಭಾರ ಅವನ ಹೊಟ್ಟೆಯ ಮೇಲೆ ಬೀಳದಂತೆ ಮಾಡಬೇಕು. ಆಹಾರವನ್ನು ಕೊಡಲೇಬೇಕಾಗಿದ್ದರೆ ಜೀವನಾಧಾರಕ್ಕೆ ಬೇಕಾಗುವಷ್ಟು ಮಾತ್ರ ಹಗುರಾದ ಆಹಾರವನ್ನು ಕೊಡಬೇಕು.

೧೨ ಆಕಳ ಅಥವಾ ಆಡಿನ ಹಾಲು ಬಹಳ ಹಗುರಾಗಿರುವದು. ಖಾಯಿಲೆ ಬಿದ್ದಾಗ ಪ್ರಾಣಾಧಾರಕ್ಕೆ ೧೦ರಿಂದ ೨೦ ತೊಲಿ ಹಾಲು ಸಾಕಷ್ಟೆನಿಸುವದು.

೧೩ ಬೇನೆಬಿದ್ದಾಗ ಮತ್ತು ಉಪವಾಸ ಮಾಡಿದಾಗ ರೋಗಿಗೆ ಸಾಕಷ್ಟು ಪ್ರಮಾಣದಲ್ಲಿ ಸ್ವಚ್ಛವಾದ ನೀರನ್ನು ಕುಡಿಸಬೇಕು. ನೀರೊಡನೆ ಉಪ್ಪು ಇಲ್ಲವೆ ಸೋಡಾಬಾಯ್‌ಕಾರ್ಬ ಬೆರೆಸಿ ಕೊಡುವದು ಒಳಿತು. ಹುಳಿನಿಂಬೆಯ ರಸವನ್ನೂ ಕೊಡಬಹುದು; ಚಳಿಜ್ವರ, ತಲೆನೋವು, ವಾಂತಿ ಆಗುತ್ತಿದ್ದರೆ ನಿಂಬೆಹಣ್ಣಿನ ರಸವನ್ನು ಅವಶ್ಯವಾಗಿ ಕೊಡತಕ್ಕದ್ದು.

೧೪ ಅಸ್ಥಿಜ್ವರ, ಚಳಿಜ್ವರಕ್ಕೆ ಕ್ವಿನೀನು ಕೊಡಬೇಕಾಗುವದು; ಮೇಲೆ

ವಿವರಿಸಿದ ಉಪಚಾರಗಳನ್ನು ಸರಿಯಾಗಿ ಮಾಡಿದರೆ ಡಾಕ್ಟರರು ಕೊಡುವಷ್ಟು ಪ್ರಮಾಣದಲ್ಲಿ ಕ್ವಿನೀನು ಕೊಡಬೇಕಾಗುವದಿಲ್ಲ. ಕ್ವಿನೀನು ನಿಂಬೆ ಹಣ್ಣಿನ ರಸದಲ್ಲಿ ಬೆರೆಸಿ ಸೋಡಾದೊಡನೆ ಸೇವಿಸಿದರೆ ಹೆಚ್ಚು ಹಾನಿಯಿಲ್ಲ.

೧೫ ಜ್ವರವು ಅತ್ಯಧಿಕವಾಗಿದ್ದು ಅದನ್ನು ಬೇಗನೆ ಇಳಿಸುವದು ಇಷ್ಟವಿದ್ದಲ್ಲಿ ಒದ್ದೆಬಟ್ಟೆಯ ಉಪಚಾರವನ್ನು ಮಾಡತಕ್ಕದ್ದು. 'ಆರೋಗ್ಯ ರಕ್ಷಣೆಯ ಸಾಮಾನ್ಯಜ್ಞಾನ' ಪುಸ್ತಕದಿಂದ ಈ ಉಪಚಾರವನ್ನು ಅರಿತುಕೊಳ್ಳಬೇಕು.

೧೬ ಕಟ್ಟಿನ ಜ್ವರವಿರದೆ ಬಹಳ ದಿನಗಳ ವರೆಗೆ ಜ್ವರ ನಿಲ್ಲದೆ ಬರುತ್ತಿದ್ದರೆ ನೀರು ಹವೆ ಬದಲಾಯಿಸುವದು ಅವಶ್ಯವಿದೆಯೆಂದು ತಿಳಿಯಬೇಕು ಮತ್ತು ರೋಗಿಯನ್ನು ನೀರು ಹವೆಯು ಚನ್ನಾಗಿದ್ದ ಕಡೆಗೆ ಕರೆದುಕೊಂಡು ಹೋಗಬೇಕು. ಆರೋಗ್ಯವರ್ಧನಕ್ಕಾಗಿ ಪ್ರಸಿದ್ಧವಿದ್ದ ಸ್ಥಳಗಳಿಗೆ ಹೋಗಬೇಕಾದದ್ದೇನೂ ಇಲ್ಲ.

೧೭ ಮೇಲೆ ಸೂಚಿಸಲ್ಪಟ್ಟ ಉಪಚಾರಗಳು ಕಡಿಮೆ ಚಿಂತಾಜನಕವಾಗಿರುವ ಚಿಕ್ಕ ಚಿಕ್ಕ ರೋಗಗಳಿಗೋಸ್ಕರ ಇರುವವು. ಕ್ಷಯ, ತೊನ್ನು, ರಕ್ತಪಿತ್ತ, ಹಳೆಯ ರೋಗ ಮುಂತಾದ ದೊಡ್ಡ ರೋಗಗಳಿಗೂ ಈ ಉಪಚಾರಗಳನ್ನು ಮಾಡಬಹುದು. ಆದರೆ ಇದಕ್ಕೋಸ್ಕರ ಅನುಭವಿಗಳ ಸಲಹೆ, ಸಮಾಧಾನದಿಂದ ಕಾರ್ಯ ಮಾಡುವ ಗುಣ ಮತ್ತು ತಾಳ್ಮೆ ಬೇಕು.

೧೮ ಔಷಧಗಳ ಮೇಲೆ ವಿಶ್ವಾಸವಿಡುವ ಅಭ್ಯಾಸವು ಒಳಿತಾದದ್ದಲ್ಲ. ಔಷಧದಿಂದ ಯಾವ ಹಳೆಯ ರೋಗವೂ ಗುಣವಾಗಲಾರದೆಂದು ಇಲ್ಲಿ ಹೇಳಿದರೆ ಅತಿಶಯೋಕ್ತಿಯಾಗದು.

೧೯ ಡಾಕ್ಟರರು ರೋಗಿಗಳಿಗೆ ಸರಳವಾದ ಉಪಚಾರಗಳನ್ನು ಕಲಿಸತಕ್ಕದ್ದು ಹಾಗೂ ಔಷಧಗಳ ಮೇಲೆ ಅವಾಸ್ತವ ನಂಬಿಗೆ ಹುಟ್ಟಿಸಕೂಡದು.

೨೦ ಗಾರುಡಿಗರ ಯಂತ್ರಮಂತ್ರದ ಮೇಲಿರುವಷ್ಟೆ ಅಂಧವಿಶ್ವಾಸವು ಎಷ್ಟೋ ಸಲ ಡಾಕ್ಟರುಗಳ ಔಷಧಗಳ ಮೇಲೂ ಇರುವದು. ವಾಸ್ತವಿಕವಾಗಿ ರೋಗಿಯ ರಕ್ತದಲ್ಲಿದ್ದ ಜೀವನಶಕ್ತಿಯೆ ಅವನನ್ನು ನಿರೋಗಿಯನ್ನಾಗಿ ಮಾಡುವದು. ಈ ಶಕ್ತಿಯು ಕಡಿಮೆಯಾಗಿರದಿದ್ದರೆ ರೋಗಿಯು ಬದುಕುವನು. ಅವನ ಈ ಶಕ್ತಿಯನ್ನು ಕಂದಿಸದಿರುವದಕ್ಕೆ ಮೇಲೆ ವಿವರಿಸಿದ ಉಪಚಾರಗಳು ಸಾಕಷ್ಟಾಗುವವು. ಈ ಉಪಚಾರಗಳನ್ನು ಮಾಡಿದ ಮೇಲೂ

ಬದುಕದಿದ್ದರೆ ಅವನ ಆಯುಷ್ಯವೆ ತೀರಿಹೋಯಿತೆಂದು ಭಾವಿಸಬೇಕು. ಡಾಕ್ಟರರ ಮತ್ತು ಮಂತ್ರಯಂತ್ರತಂತ್ರಗಾರರ ಬಲೆಗೆ ಸಿಕ್ಕು ಹಣವನ್ನು ಕಳೆದುಕೊಳ್ಳಬಾರದು.

೨೧ ಸೋಡಾಬಾಯ್‌ಕಾರ್‍ಬ್, ಔಡಲೆಣ್ಣೆ, ಕ್ವಿನೀನು ಮತ್ತು ಬಾಹ್ಯ ಉಪಚಾರಗಳಿಗಾಗಿ ಆಯೋಡಿನ್ ಇವುಗಳ ಹೊರತಾಗಿ ಹೆಚ್ಚಿಗೆ ಔಷಧಗಳು ಗ್ರಾಮಸೇವಕನಿಗೆ ಬೇಕಾಗುವದಿಲ್ಲ. ಇವುಗಳೊಡನೆ ಒಂದು ಎನಿಮಾ ಇದ್ದರೆ ಅವನ ಔಷಧಾಲಯವು ಪರಿಪೂರ್ಣವಾಯಿತೆಂದು ತಿಳಿಯತಕ್ಕದ್ದು.

## ೮ ಆಹಾರ

೧ ಮಾಂಸಾಹಾರದ ಆವಶ್ಯಕತೆಯೇ ಮನುಷ್ಯನಿಗೆ ಇಲ್ಲ.

೨ ಮಾಂಸಾಹಾರವನ್ನು ಬಿಟ್ಟದ್ದರಿಂದಲೆ ಹಿಂದೂ ಜನರ ಅಧಃಪತನ ವಾಗಿದೆಯೆಂದು ತಿಳಿಯುವದು ತಪ್ಪಾದುದು, ನಿರಾಧಾರವಾದುದು. ಏಕೆಂದರೆ ಹಿಂದೂ ರಾಜರೂ ಸೈನಿಕ ಜಾತಿಯವರೂ ಬಹುಕಾಲ ಮಾಂಸಾಹಾರವನ್ನು ಬಿಟ್ಟಂತೆ ತೋರುವದಿಲ್ಲ. ಅಂದ ಬಳಿಕ ಹಲವು ಜನರು ಬಿಟ್ಟದ್ದು ಈ ಅಧಃ ಪತನಕ್ಕೆ ಕಾರಣವಾಗಲಾರದು.

೩ ಇದಲ್ಲದೆ ಮಾಂಸಾಹಾರವನ್ನು ಬಿಟ್ಟವರು ಸಶಕ್ತರೂ ನಿರೋಗಿ ಗಳೂ ಕಲಿಗಳೂ ಆಗಲಾರರೆಂದು ತಿಳಿಯಲಿಕ್ಕೆ ಕಾರಣಗಳೇ ಇಲ್ಲ.

೪ ನಿರಾಮಿಷ ಆಹಾರದ ಪಕ್ಷವನ್ನು ಕಟ್ಟಿದಾಗ್ಯೂ ಮಾಂಸಾಹಾರಿ ಗಳನ್ನು ದ್ವೇಷಿಸುವದು ಯೋಗ್ಯವಲ್ಲ. ಕೇವಲ ಬಡತನದಿಂದ ಹಿಂದುಸ್ತಾನದ ಎಷ್ಟೋ ಜಾತಿಗಳು ಮಾಂಸಾಹಾರವನ್ನು ಮಾಡಬೇಕಾಗಿರುವದು.

೫ ಹಾಲೂ ಮಾಂಸವೆ. ಆದರೆ ಮಾಂಸಕ್ಕಾಗಿ ಪ್ರಾಣಿವಧೆ, ಹಿಂಸೆ ಮಾಡಬೇಕಾಗುತ್ತದೆ ಹಾಲಿಗಾಗಿ ಮಾಡಬೇಕಾಗುವದಿಲ್ಲ, ಇಷ್ಟೇ ಇವೆರಡೂ ಆಹಾರಗಳಲ್ಲಿ ಅಂತರವಿರುವದು. ಚಿತ್ತಶುದ್ಧಿಗೆ ಹಾಲಿನ ಆಹಾರವೂ ಬಾಧಕವಾಗುವದು.

೬ ಆದರೆ ನಿರಾಮಿಷ ಆಹಾರಗಳಿಗೆ ಹಾಲಿನ ಬದಲು ಅದರಷ್ಟೆ ಪುಷ್ಟಿ ವರ್ಧಕವಾದ ವನಸ್ಪತಿ ಆಹಾರವನ್ನು ಸೂಚಿಸಲಾಗುವದಿಲ್ಲ. ಆದ್ದರಿಂದ ಹಾಲು ಅಪವಾದಸ್ವರೂಪವೆಂದು ನಿರ್ಧರಿಸಿದ ಹೊರತು ಗತ್ಯಂತರವಿಲ್ಲ. ಹಾಲು ಸರ್ವರಿಗೂ ಸಿಕ್ಕುವಂತೆ ಉಪಾಯಗಳನ್ನು ಯೋಜಿಸುವದೂ ಅವಶ್ಯ

೭ ವನದ ಪಕ್ವ ಅಥವಾ ಬೇಯಿಸದೆ ಇದ್ದ ಆಹಾರವು ಸೃಷ್ಟಿನಿರ್ಮಿತ ವಾಗಿರುವದರಿಂದ ನಿರಾಮಿಷ ಆಹಾರದಲ್ಲಿ ಅತ್ಯಂತ ಶ್ರೇಷ್ಠವಾಗಿರುತ್ತದೆ. ಸರ್ವ ಪ್ರಾಣಿಗಳು ನಿಸರ್ಗವು ಸಿದ್ಧಪಡಿಸಿದ ಆಹಾರವನ್ನು ಬೇಯಿಸದೆ ಅದರ ಮೂಲರೂಪದಲ್ಲಿಯೆ ತಿನ್ನುವವು. ಈ ನಿಯಮಕ್ಕೆ ಮನುಷ್ಯನು ಅಪವಾದ ವಾಗಲು ಯಾವ ಕಾರಣವೂ ಇಲ್ಲ.

೮ ನಾವು ನೈಸರ್ಗಿಕ ಸ್ಥಿತಿಯಿಂದ ಪತಿತರಾಗಿ ಅಡಿಗೆಯ ಜಾಲದಲ್ಲಿ ಸಿಕ್ಕುಬಿಟ್ಟಿದ್ದೇವೆ. ಆದ್ದರಿಂದಲೆ ಮನುಷ್ಯಜಾತಿಯ ಅತಿ ದೊಡ್ಡಭಾಗವು ನೈಸರ್ಗಿಕ ಆಹಾರದಿಂದ ಜೀವಿಸಲು ಅಯೋಗ್ಯವಾದಂತಾಗಿದೆ. ಯಾವ ಆಹಾರವನ್ನು ನಾವು ಸ್ವಾಭಾವಿಕವಾಗಿ ತೆಗೆದುಕೊಳ್ಳುತ್ತ ಇರಬೇಕಾಗಿದೆಯೊ ಅದನ್ನೀಗ ಕುಶಲ ಅನ್ನಶಾಸ್ತ್ರಜ್ಞನ ಸಲಹೆಯ ಹೊರತು ತೆಗೆದುಕೊಳ್ಳಲು ಬರದಂಥ ಸ್ಥಿತಿಯು ಬಂದುಬಿಟ್ಟಿದೆ.

೯ ಆದ್ದರಿಂದ ಈಗ ಬಹು ಜನರು ಅಡಿಗೆಯನ್ನು ಮಾಡಿಕೊಳ್ಳಲೆ ಬೇಕಾಗಿರುವದು. ಆಹಾರವನ್ನು ಬೇಯಿಸುವದು, ಸುಡುವದು ಮತ್ತು ಹುರಿಯುವದು ಇಷ್ಟೇ ಅಡಿಗೆ ಮಾಡುವದೆನಿಸುವದು. ಆದರೆ ಮನುಷ್ಯನು ಇಲ್ಲಿಗೇ ನಿಲ್ಲಲಿಲ್ಲ. ಅಡಿಗೆಯೆಂಬ ಸುಧಾರಣೆ (?) ಮಾಡಿದ ಬಳಿಕ ನಾಲಿಗೆ ರುಚಿಯ ಬಲೆಗೆ ಬಿದ್ದು ನಾನಾ ತರದ ಮಸಾಲೆಗಳನ್ನೂ ಪಕ್ವಾನ್ನಗಳನ್ನೂ ಶೋಧಿಸಿಬಿಟ್ಟನು ! ಶರೀರವನ್ನು ಕಾಯ್ದಿಟ್ಟುಕೊಳ್ಳುವದಕ್ಕಾಗಿ ಯಾವ ವಸ್ತುವನ್ನು (ಅಡಿಗೆ) ಔಷಧದಂತೆ ಉಪಯೋಗಿಸಬೇಕಾಗಿತ್ತೊ ಆ ವಸ್ತು ಈಗ ಜೀವನದ ಮಹತ್ವದ ವ್ಯವಸಾಯವಾಗಿದೆ ಮತ್ತು ಅದಕ್ಕಾಗಿ ಜೀವನದ ಎಷ್ಟೋ ಸಮಯವು ಮತ್ತು ಶಕ್ತಿಯು ವ್ಯರ್ಥ ವೆಚ್ಚವಾಗುತ್ತಿದೆ.

೧೦ ಆರೋಗ್ಯದ ದೃಷ್ಟಿಯಿಂದ, ವಿಕಾರಗಳ ದೃಷ್ಟಿಯಿಂದ ಹಾಗೆಯೆ ಸಮಯದ ದೃಷ್ಟಿಯಿಂದ ಮಸಾಲೆ ಹಾಗೂ ನಾನಾ ತರದ ಸವಿಸವಿ ಆಹಾರ ಪದಾರ್ಥಗಳನ್ನು ಉಪಯೋಗಿಸುವದು ದೋಷಯುಕ್ತವಾಗಿರುವದು, ಅಲ್ಲದೆ ತ್ಯಾಜ್ಯವೂ ಆಗಿರುವದು.

೧೧ ಹಿಂದುಸ್ತಾನದಲ್ಲಿ ನಾವೀಗ ಕಾಯಿಪಲ್ಲೆ ಮತ್ತು ಫಲಗಳನ್ನು ಯಾವ ಪ್ರಮಾಣದಲ್ಲಿ ತಿನ್ನುವೆವೊ ಅದಕ್ಕಿಂತ ಹೆಚ್ಚು ಪ್ರಮಾಣದಲ್ಲಿ ಅವನ್ನು ತಿನ್ನತಕ್ಕದ್ದು. ವಿಶೇಷತಃ ಟೊಮ್ಯಾಟೊ, ಮೂಲಂಗಿ, ಸವತೀ ಕಾಯಿ ಮುಂತಾದ ಎಷ್ಟೋ ಕಾಯಿಪಲ್ಲೆಗಳನ್ನು ಬೇಯಿಸದೆ ತಿನ್ನುವದು

ಅವಶ್ಯವಿದೆ. ಊಟಕ್ಕೆ ಬೇಳೆಗಿಂತಲೂ ಕಾಯಿಪಲ್ಲೆ, ವಿಶೇಷತಃ ಬೇಯಿಸದೆ ಇದ್ದ ಹಸರು ತೊಪ್ಪಲ, ಕಾಯಿಪಲ್ಲೆ ಹೆಚ್ಚು ಬೇಕು.

೧೨ ಚಹಾ ಮತ್ತು ಕಾಫೀ ಇವು ಅತ್ಯಂತ ಹೊಸ ಚಟಗಳು. ನಮಗೆ ಇಂಥ ಪೇಯಗಳ ಚಟವು ಇದ್ದಿಲ್ಲ. ಇವುಗಳ ಸೇವನೆಯಿಂದ ನಮಗೆ ಯಾವ ಲಾಭವೂ ಆಗಿಲ್ಲ. ಆದರೆ ಇವೆರಡೂ ಹಾನಿಕಾರಕ ಪದಾರ್ಥಗಳು. ಚಹಾ ತೋಟಗಳಲ್ಲಿ ಮಾನವ ಹಿಂಸೆಯು ಬಹಳವಾಗುತ್ತಿರುವದು. ಇವು ನಮ್ಮ ಆಹಾರದ ವೆಚ್ಚವನ್ನು ವ್ಯರ್ಥವಾಗಿ ಬೆಳೆಯಿಸಿರುವವು. ಇದರಿಂದ ಹಳ್ಳಿಗಳಲ್ಲಿ ಹಾಲು ಉಳಿದಿರುವದಿಲ್ಲ ಮತ್ತು ಸಕ್ಕರೆಯ ಉಪಯೋಗವೂ ಹೆಚ್ಚಾಗಿ ಹಾನಿಕರವಾಗುತ್ತಿದೆ.

೧೩ ಚಹಾ, ಕಾಫೀ, ತಂಬಾಕು, ಅಫೀಮು, ಗಾಂಜೀ ಮತ್ತು ಭಾಂಗು ಗಳನ್ನು ಸೇವಿಸುವ ವ್ಯಸನಿಗಳು ತಾವು ಸ್ಥಿರವೀರ್ಯವುಳ್ಳವರೆಂದು ಹೇಳಿ ಕೊಂಡರೆ ನಂಬಲಾಗದೆಂದು ಎಷ್ಟೋ ಅನುಭವಿಗಳು ಅಭಿಪ್ರಾಯಪಡುವರು.

## ೯ ವ್ಯಾಯಾಮ

೧ ಚಿಕ್ಕಂದಿನಿಂದ ಸಾಕಷ್ಟು ಶಾರೀರಕ ಶ್ರಮ ಮಾಡಬೇಕಾಗುವವರಿಗೆ ಗರಡೀಸಾಧನೆಯ ಆವಶ್ಯಕತೆಯು ಅಷ್ಟು ಬೀಳುವದಿಲ್ಲ.

೨ ಕುಳಿತು ಉದ್ಯೋಗ ಮಾಡುವವರಿಗೆ, ಸಿಪಾಯಿಗಳಿಗೆ ಅಥವಾ ಉದರನಿರ್ವಾಹಕ್ಕಾಗಿ ಕುಸ್ತಿಮಾಡುವ ಜಟ್ಟಿಗಳಿಗೆ ಮಾತ್ರ ಗರಡೀಮನೆಯ ವ್ಯಾಯಾಮವು ಬೇಕು.

೩ ವ್ಯಾಯಾಮ ಶಾಲೆಯ ಕಸರತ್ತುಗಳಿಂದ ಮನುಷ್ಯರು ದೀರ್ಘಾಯುಷಿ ಗಳೂ ನಿರೋಗಿಗಳೂ ಅಥವಾ ಕಲಿಗಳೂ ಶ್ರಮಸಹಿಷ್ಣುಗಳೂ ಆಗಿಯೆ ತೀರುವರೆಂದು ಹೇಳಲಿಕ್ಕೆ ಆಗುವದಿಲ್ಲ, ಈ ತರದ ಅನುಭವವೂ ಬಂದಿಲ್ಲ. ಎಷ್ಟೋ ವ್ಯಾಯಾಮವಿಶಾರದರ ಮೈಕಟ್ಟು ಬಲಿಷ್ಠವಾಗಿದ್ದರೂ ಅವರು ಹೇಡಿ ಹೃದಯವುಳ್ಳವರಿದ್ದಾರೆ. ಕಸರತ್ತು ಬಿಟ್ಟು ಬೇರೆ ಬಗೆಯ ಪರಿಶ್ರಮ ವನ್ನು ಹೆಚ್ಚು ಮಾಡಿದ ಕೂಡಲೆ ಮತ್ತು ಬಿಸಿಲು ಚಳಿ ಹೆಚ್ಚು ತಗಲಿದ ಕೂಡಲೆ ಹಣ್ಣಾಗುವ ಮಲ್ಲರೂ ಅನೇಕರಿದ್ದಾರೆ, ಇದೂ ನಮ್ಮ ದೃಷ್ಟಿಗೆ ಬೀಳುತ್ತದೆ.

೪ ವ್ಯಾಯಾಮ ಶಾಲೆಯ ಕಸರತ್ತುಗಳು ವಿಕಾರವರ್ಧಕವಿರುವವು;

ಅವುಗಳಿಂದ ಸಾಮಾನ್ಯವಾಗಿ ಶರೀರದಲ್ಲಿ ಕಾವು ಹೆಚ್ಚಾಗುವದು ಮತ್ತು ಭೋಜನಕ್ಕೂ ಭೋಗವೃತ್ತಿಗೂ ಉತ್ತೇಜನವು ದೊರೆಯುವದು.

೫ ವ್ಯಾಯಾಮಶಾಲೆಯಲ್ಲಿಯ ಎಲ್ಲ ಅಂಗಸಾಧನೆಗಳನ್ನು ನಿಷೇಧಿಸಬೇಕೆಂದು ನಾವು ಅಭಿಪ್ರಾಯಪಡುವದಿಲ್ಲ. ಉಳಿದ ಅಂಗಸಾಧನೆಗಳಂತೆಯೆ ಅವಕ್ಕೂ ಒಂದು ಮೇರೆ ಇರಬೇಕು, ಮಿತಿ ಇರಬೇಕು.

೬ ಸಂಘವ್ಯಾಯಾಮ-ಕವಾಯಿತು-ಡ್ರಿಲ್ ಅತ್ಯಂತ ಉಪಯೋಗೀ ವ್ಯಾಯಾಮವು. ಇದು ಎಲ್ಲ ತರುಣ - ತರುಣಿಯರಿಗೂ ಅವಶ್ಯವಾಗಿ ದೊರೆಯಬೇಕು.

೭ ಸಾತ್ವಿಕ ವ್ಯಾಯಾಮಗಳಲ್ಲಿ ತಿರುಗಾಡುವದು ಒಂದು ಶ್ರೇಷ್ಠ ವ್ಯಾಯಾಮವು. ಇದು ಶರೀರದ ಆರೋಗ್ಯಕ್ಕಾಗಿ ಅವಶ್ಯವಾಗಿ ಬೇಕು. ಇದು ವ್ಯಾಯಾಮಗಳ ಅರಸನಾಗಿರುವದೆಂದು ಹೇಳುವರು, ಇದು ದಿಟವು.

೮ ಬಳಿಕ, ಆಸನಗಳೂ ಪ್ರಾಣಾಯಾಮವೂ ಸಾತ್ವಿಕ ವ್ಯಾಯಾಮಗಳೆನಿಸುವವು. ಈ ವ್ಯಾಯಾಮಗಳ ಉದ್ದೇಶವು ಶರೀರವನ್ನು ಶುದ್ಧಮಾಡುವದು ಇರುವದೇ ವಿನಾ ಭೋಗಕ್ಕೆ ಅಣಿಮಾಡುವದು ಇರುವದಿಲ್ಲ. ಇವುಗಳಿಂದ ಎಷ್ಟೋ ರೋಗಗಳೂ ಗುಣಹೊಂದುವವು.

೯ ಆದರೆ ಈ ವ್ಯಾಯಾಮಗಳನ್ನು ತಮ್ಮ ಉಪಜೀವಿಕೆಯ ವ್ಯವಸಾಯಗಳನ್ನಾಗಿ ಮಾಡಿಕೊಂಡರೆ ಮತ್ತು ಅವುಗಳಿಂದ ದೊರೆಯುವ ಸಿದ್ಧಿಯ ಬೆನ್ನುಹತ್ತಿದರೆ ಅವುಗಳ ದುರುಪಯೋಗ ಮಾಡಿಕೊಂಡಂತಾಗುವದು. ಮಲಮೂತ್ರಗಳ ಮುಖಾಂತರ ಶರೀರದಲ್ಲಿನ ಅಶುದ್ಧಿಗಳನ್ನು ಹೇಗೆ ಹೊರಗೆ ಹಾಕಬಹುದೋ ಹಾಗೆಯೆ ಆಸನ ಪ್ರಾಣಾಯಾಮಾದಿಗಳಿಂದಲೂ ಶರೀರದ ಅಶುದ್ಧಿಗಳನ್ನು ಹೊರಗೆ ಹಾಕಿ ಶರೀರವನ್ನು ಸ್ವಚ್ಛಮಾಡಬಹುದು. ಶರೀರವನ್ನು ನಿರ್ಮಲಮಾಡುವದೇ ಇವುಗಳ ಧ್ಯೇಯವು.

## ಏಕಾದಶ ಖಂಡ

# ಶಿಕ್ಷಣ

## ೧ ಶಿಕ್ಷಣದ ಧ್ಯೇಯ

೧ ಸಾ ವಿದ್ಯಾ ಯಾ ವಿಮುಕ್ತಯೇ. ಮುಕ್ತಿಯನ್ನು ದೊರಕಿಸಿಕೊಡುವದೆ ವಿದ್ಯೆಯು, ಉಳಿದುದೆಲ್ಲವೂ ಅವಿದ್ಯೆಯು.

೨ ಆದ್ದರಿಂದ ಯಾವದು ಚಿತ್ತಶುದ್ಧಿಯನ್ನು ಮಾಡುವದಿಲ್ಲವೊ ಮನಸ್ಸನ್ನು ಮತ್ತು ಇಂದ್ರಿಯಗಳನ್ನು ವಶದಲ್ಲಿಟ್ಟುಕೊಳ್ಳಲು ಕಲಿಸುವದಿಲ್ಲವೊ ಧೈರ್ಯವನ್ನೂ ಸ್ವಾವಲಂಬನೆಯನ್ನೂ ಹುಟ್ಟಿಸುವದಿಲ್ಲವೊ ಉಪಜೀವಿಕೆಯ ಮಾರ್ಗಗಳನ್ನು ತೋರಿಸುವದಿಲ್ಲವೊ ಪಾರತಂತ್ರ್ಯದಿಂದ ಬಿಡುಗಡೆಯಾಗುವದಕ್ಕಾಗಿ ಸ್ವಾತಂತ್ರ್ಯದಿಂದ ಇರುವದಕ್ಕಾಗಿ ಕಳಕಳಿ, ಸಾಹಸ, ಸಾಮರ್ಥ್ಯವನ್ನು ಹುಟ್ಟಿಸುವದಿಲ್ಲವೊ ಆ ಶಿಕ್ಷಣದಲ್ಲಿ ಜ್ಞಾನದ ಬೊಕ್ಕಸವೂ ತಾರ್ಕಿಕ ಕೌಶಲ್ಯವೂ ಭಾಷಾಪಾಂಡಿತ್ಯವೂ ಎಷ್ಟೇ ಇದ್ದರೂ ಅದು ಶಿಕ್ಷಣವೆನಿಸುವದಿಲ್ಲ. ಅದು ಅಪೂರ್ಣ ಶಿಕ್ಷಣವೆನಿಸುವದು.

## ೨ ಅರಾಷ್ಟ್ರೀಯ ಶಿಕ್ಷಣ

೧ ನೂರಕ್ಕೆ ೮೦-೮೫ ಜನರ ಜೀವನಕ್ಕೆ ಬೇಕಾಗುವ ಆವಶ್ಯಕತೆಗಳ ವಿಚಾರ ಮಾಡುವದರ ಬದಲಾಗಿ ಹಿಡಿತುಂಬ ಜನರ ಅಥವಾ ರಾಜ್ಯದ ಕೆಲವು ವಿಭಾಗಗಳ ಆವಶ್ಯಕತೆಗಳನ್ನು ಕುರಿತು ಮಾತ್ರ ವಿಚಾರಮಾಡಿ ಕೊಡಲ್ಪಡುವ ಶಿಕ್ಷಣವು ರಾಷ್ಟ್ರೀಯ ಶಿಕ್ಷಣವೆನಿಸುವದೆ ಇಲ್ಲ. ಅದು ಅಸತ್ಯಶಿಕ್ಷಣವಾಗಿರುವದರಿಂದ ಅವಿದ್ಯೆಯೆ ಇರುವದು.

೨ ಇಂಥ ಶಿಕ್ಷಣವು ಶಿಕ್ಷಿತರ ಮತ್ತು ಅಶಿಕ್ಷಿತರ ನಡುವೆ ಮಹದಂತರವನ್ನುಂಟುಮಾಡಿದೆ ಮತ್ತು ವಿದ್ವಾಂಸರನ್ನು ಪ್ರಜರ ಮುಖಂಡರನ್ನಾಗಿಯೂ ಮಾರ್ಗದರ್ಶಕರನ್ನಾಗಿಯೂ ಪ್ರತಿನಿಧಿಗಳನ್ನಾಗಿಯೂ ಮಾಡದೆ ಅವರನ್ನು ಪ್ರಜರಿಂದ ಬೇರ್ಪಟ್ಟವರನ್ನಾಗಿ, ಪ್ರಜರ ಜೀವನ ಮತ್ತು ಭಾವಗಳನ್ನರಿಯದವರನ್ನಾಗಿ ಮಾಡಿರುವದಲ್ಲದೆ ಪ್ರಜಾಪಕ್ಷವನ್ನು ಮಂಡಿಸಲು ಅಯೋಗ್ಯರನ್ನಾಗಿ ಮಾಡಿಬಿಟ್ಟಿದೆ.

೩ ಈ ಶಿಕ್ಷಣವು ತನ್ನ ಪ್ರತಿಷ್ಠೆಯನ್ನು ಬೆಳೆಸಿಕೊಳ್ಳುವದಕ್ಕಾಗಿ ಭವ್ಯವಾದ ಭವನಗಳನ್ನು ಕಟ್ಟಿಸಿ, ದೊಡ್ಡ ಸಾಧನಗಳನ್ನು ನಿರ್ಮಿಸಿ, ಪುಸ್ತಕಗಳನ್ನು ರಚಿಸಿ, ಮರೀಚಿಕಾಜಲದಂತೆ ಮೋಸಮಾಡುವ ಲಾಭದ ಆಶೆಗಳನ್ನು ದೂರದಿಂದ ತೋರಿಸಿ, ಠೀವಿಯ ಆಡಂಬರವನ್ನು ಜನತೆಯ ಕಣ್ಣೆದುರಿನಲ್ಲಿಟ್ಟು ಜನರನ್ನು ಸಾಲದಲ್ಲಿ ಮುಳುಗಿಸಿಬಿಟ್ಟಿರುವದು.

೪ ಈ ಶಿಕ್ಷಣವು ಜನತೆಯಲ್ಲಿ ಅನೇಕ ಭ್ರಮೆಗಳನ್ನು ಹುಟ್ಟಿಸಿದೆ. ಉದಾ: ಅಕ್ಷರಜ್ಞಾನವೂ ಶಿಕ್ಷಣವೂ ಒಂದೇ, ಅಕ್ಷರಜ್ಞಾನದ ವಿನಾ ಶಿಕ್ಷಣವು ಸಿಗದು, ಶಿಕ್ಷಿತನು ಕೂಲಿಕಾರನಂತೆ ಜೀವಿಸಿದರೆ ಅವನು ಶಿಕ್ಷಣವನ್ನು ಹೀಯಾಳಿಸಿದಂತೆ, ಶಿಕ್ಷಿತರು ಎಂದರೆ ಇಂಗ್ಲೀಷು ಓದಿದವರೇ ಇತ್ಯಾದಿ.

೫ ಈ ಶಿಕ್ಷಣವು ಪ್ರಜರನ್ನು ಧರ್ಮದಿಂದ ವಿಮುಖ ಮಾಡಿದೆ, ಮತ್ತು ಅನೇಕ ಪೀಳಿಗೆಗಳಿಂದ ಸಂರಕ್ಷಿಸಲ್ಪಟ್ಟ ಧರ್ಮದ ಮತ್ತು ಸಂಯಮದ ಸಂಸ್ಕಾರಗಳನ್ನು ಸುಟ್ಟುಬಿಡುವ ಕೆಲಸವನ್ನೇ ಮಾಡುತ್ತಿದೆ.

೬ ಚಿತ್ತಶುದ್ಧಿಗೆ ಬೇಕಾಗುವ ಮಹತ್ವಪೂರ್ಣವಾದ ಅಂಗಗಳು ಈಶ್ವರ, ಗುರು-ಹಿರಿಯರು ಮೊದಲಾದವರಲ್ಲಿ ಭಕ್ತಿ, ನೀತಿಪೂರ್ಣ ಜೀವನಕ್ಕೆ ಬೇಕಾದ ಆಗ್ರಹ, ಸಂಯಮ, ಮತ್ತು ತಪಸ್ಸಿನಲ್ಲಿ ಶ್ರದ್ಧೆ ಮುಂತಾದ ಅನೇಕ ವಿಷಯಗಳನ್ನು ಕುರಿತು ಆಧುನಿಕ ಶಿಕ್ಷಣವನ್ನು ಪಡೆದವರಲ್ಲಿ ನಾನಾ ಸಂಶಯಗಳನ್ನು ಹುಟ್ಟಿಸಿದೆ ಮತ್ತು ಅವರನ್ನು ನಾಸ್ತಿಕವಾದಿಗಳನ್ನಾಗಿ ಮಾಡಲು ಯತ್ನಿಸುತ್ತಿದೆ.

೭ ಮೇಲೆ ವಿವರಿಸಿದ ಪರಿಣಾಮಗಳಿಂದ ಯಾರಾದರೂ ಉಳಿದುಕೊಂಡಿದ್ದರೆ ಈ ಶಿಕ್ಷಣದಿಂದಲ್ಲ, ಆದರೆ ಅವರವರ ಮನೆಯ ಉಚ್ಚವಾದ ವಾತಾವರಣದಿಂದ.

೮ ಈ ಶಿಕ್ಷಣವು ಭೋಗ ಮತ್ತು ಸಂಪತ್ತುಗಳಲ್ಲಿ ಅಚಲಶ್ರದ್ಧೆಯನ್ನು ಹುಟ್ಟಿಸುವದರಿಂದ ಅವುಗಳನ್ನು ಕಡಿಮೆ ಮಾಡಲು ಅವರಿಗೆ ಧೈರ್ಯವೆ ಸಾಲುವದಿಲ್ಲ. ಭೋಗಾದಿ ಕಡಿಮೆಯಾಗಬಹುದೆಂಬ ಬೆದರಿನಿಂದ ಅವರು ಅಂಜುಬುರುಕರಾಗುತ್ತಾರೆ. ಮತ್ತು ಸ್ಪಷ್ಟವಾಗಿ ತೋರುವ ಧರ್ಮವನ್ನು ಆಚರಿಸಲು ತಾವು ಅಶಕ್ತರಿದ್ದೇವೆಂದು ಹೇಳುತ್ತಾರೆ.

## ೩ ರಾಷ್ಟ್ರೀಯ ಶಿಕ್ಷಣ

೧ ಹಿಂದುಸ್ತಾನಲ್ಲಿ ನೂರಕ್ಕೆ ೮೦-೮೫ ಜನರು ಯಾವ ತರದ ಜೀವನ

ವನ್ನು ಕಳೆಯಬೇಕಾಗುತ್ತದೆಯೊ ಅದನ್ನು ಕುರಿತು ವಿಚಾರಿಸಿ ಹಿಂದುಸ್ತಾನದ ರಾಷ್ಟ್ರೀಯ ಶಿಕ್ಷಣವು ಯೋಜಿಸಿದ್ದಿರಬೇಕು.

೨ ಹಿಂದುಸ್ತಾನದಲ್ಲಿ ನೂರಕ್ಕೆ ೮೦-೮೫ ಜನರು ಪ್ರತ್ಯಕ್ಷ ಇಲ್ಲವೆ ಅಪ್ರತ್ಯಕ್ಷವಾಗಿ ಒಕ್ಕಲತನದಿಂದ ಜೀವಿಸುವರು. ಆದ್ದರಿಂದ ಇವರನ್ನು ಒಳ್ಳೆ ಒಕ್ಕಲಿಗರನ್ನು ಮಾಡುವ ದೃಷ್ಟಿಯಿಂದಲೂ ಒಕ್ಕಲತನಕ್ಕೆ ಸಂಬಂಧಪಟ್ಟ ಉದ್ಯೋಗಗಳ ಜ್ಞಾನವನ್ನು ಇವರಿಗೆ ಮಾಡಿಕೊಡುವ ದೃಷ್ಟಿಯಿಂದಲೂ ಇವರ ಶಿಕ್ಷಣವು ಯೋಜಿಸಿದ್ದಿರಬೇಕು.

೩ ಶಿಕ್ಷಣದಿಂದ ಜೀವನನಿರ್ವಾಹದ ಪ್ರಶ್ನೆಯು ಬಿಡಿಸಲ್ಪಡಬೇಕು. ಅದಕ್ಕೋಸ್ಕರ ಔದ್ಯೋಗಿಕ ಶಿಕ್ಷಣವು ಈ ಶಿಕ್ಷಣದ ಮುಖ್ಯ ಅಂಗವಾಗಿರಬೇಕು.

೪ ಎಲ್ಲಿಯ ವರೆಗೆ ಉದರನಿರ್ವಾಹದ ಪ್ರಶ್ನೆಯು ಬಿಡಿಸಲ್ಪಡುವುದಿಲ್ಲವೊ ಅಲ್ಲಿಯ ವರೆಗೆ 'ಸಂಸ್ಕೃತಿ (Culture) ಶಿಕ್ಷಣ' ಇಲ್ಲವೆ 'ಈಶ್ವರೀ ಜ್ಞಾನವನ್ನು ಮಾಡಿಕೊಡುವ ಶಿಕ್ಷಣ' ಇವುಗಳ ಮಾತುಗಳು ನಿರರ್ಥಕವಿರುವವು.

೫ ಈ ತರದ ಶಿಕ್ಷಣವನ್ನು ಹೊಲದಲ್ಲಿ ಇಲ್ಲವೆ ಹಳ್ಳಿಯಲ್ಲಿಯೆ ಕೊಡಬಹುದು. ದೊಡ್ಡ ಊರುಗಳಲ್ಲಿ ಇಲ್ಲವೆ ಪಟ್ಟಣಗಳಲ್ಲಿ ಈ ತರದ ಶಿಕ್ಷಣವು ದೊರೆಯದು.

೬ ಓದುವದಕ್ಕೂ ಬರೆಯುವದಕ್ಕೂ ಕಲಿಯುವದಕ್ಕಿಂತ ಮೊದಲು ಈ ಶಿಕ್ಷಣವನ್ನು ಕೊಡಲು ಬರುವದೆ ಇಲ್ಲವೆಂದರೆ ಹಿಂದುಸ್ತಾನದ ಜನರನ್ನು ಸುಶಿಕ್ಷಿತರನ್ನಾಗಿ ಮಾಡಲು ಹತ್ತಿಪ್ಪತ್ತು ಶತಮಾನಗಳು ಬೇಕು.

೭ ಆದರೆ ಅಕ್ಷರಜ್ಞಾನದ (ಓದುಬರಹದ ಜ್ಞಾನ) ಮಾತನ್ನು ವಿರೋಧಿಸದೆ ಅದರ ವಿನಾ ಶಿಕ್ಷಣವನ್ನು ಕೊಡಬಹುದು ಮತ್ತು ಕೊಡತಕ್ಕದ್ದೆಂದು ಹೇಳತಕ್ಕದ್ದು.

೮ ಓದುಬರಹದ ಜ್ಞಾನವಿಲ್ಲದಿದ್ದರೂ ಮನುಷ್ಯನು ಅಂಕೆಮುಗ್ಗಿಯನ್ನು ಕಲಿಯಬಲ್ಲನು, ತನ್ನ ಉದ್ಯೋಗಕ್ಕೆ ಬೇಕಾಗುವಂಥ ಜ್ಞಾನಾರ್ಜನೆ ಮಾಡಿಕೊಳ್ಳಬಲ್ಲನು, ಸಾಹಿತ್ಯವನ್ನರಿತುಕೊಳ್ಳಬಲ್ಲನು, ಸಾಹಿತ್ಯವನ್ನು ಕೇಳಬಲ್ಲನು ಕಂಠಸ್ಥಮಾಡಬಲ್ಲನು ಹಾಗೂ ಸಾಮರ್ಥ್ಯವಿದ್ದರೆ ಸೃಜಿಸಲೂ ಬಲ್ಲನು ಮತ್ತು ಅವನಲ್ಲಿ ಸತ್ಯದ ಸಾಕ್ಷಾತ್ಕಾರದ ಬಗ್ಗೆ ಕಳಕಳಿ ಇದ್ದರೆ ಪರಮಾತ್ಮಜ್ಞಾನವನ್ನು ಕೂಡ ಸಂಪಾದಿಸಬಲ್ಲನು.

೯ ಅನೇಕ ಸಾರೆ ನೂರಾರು ಕಲಿತಂಥ ಮನುಷ್ಯರ ಜ್ಞಾನಭಾಂಡಾರವು ಕೂಡ ಅನೇಕ ಗ್ರಂಥಗಳನ್ನು ಓದಿದ ಬಳಿಕ ಸಹ ಅತ್ಯಲ್ಪವಿರುವದು. ಅವರು ಲಕ್ಷಾಂತರ ಜನರಿಗೆ ತಮ್ಮಷ್ಟೆ ಜ್ಞಾನಭಾಂಡಾರವನ್ನು ಸಂಪಾದಿಸಲು ಓದ ಬೇಕೆಂದು ಹೇಳಿ ಅವರನ್ನು ಓದುಬರಹದ ತೊಡಕಿನಲ್ಲಿ ಸೇರಿಸುವದಕ್ಕಿಂತಲೂ ಅವರಿಗೆ ಬಾಯಿಂದ ಶಿಕ್ಷಣವನ್ನು ಕೊಟ್ಟರೆ ಅನೇಕ ವರ್ಷಗಳಲ್ಲಿ ಕೊಡುವಂಥ ಜ್ಞಾನವನ್ನು ಅಲ್ಪ ವರ್ಷಗಳಲ್ಲಿ ಕೊಡಬಹುದೆಂಬ ಅನುಭವವುಂಟಾಗುವದು.

೧೦ ಮೇಲಾಗಿ ಬಡ ಹಿಂದುಸ್ತಾನದ ಶಿಕ್ಷಣಪದ್ಧತಿಯು ಬಹಳ ಹಣವು ಬೇಕಾಗುವ ಪದ್ಧತಿಯಾಗಿರತಕ್ಕದ್ದಲ್ಲ.

೧೧ ಆದ್ದರಿಂದ ಈ ಶಿಕ್ಷಣವನ್ನು ಬೇಗನೆ ಪೂರ್ತಿಗೊಳಿಸಬೇಕೆಂದು ಯಾರೂ ಹವ್ಯಾಸಪಡಕೂಡದು. ಉದ್ಯೋಗ ಮಾಡುತ್ತ, ನಿರ್ವಾಹವನ್ನು ಸಾಗಿಸುತ್ತ ಈ ಶಿಕ್ಷಣವನ್ನು ಆಜನ್ಮಪಡೆಯುತ್ತಿರಬಹುದು. ಈ ಶಿಕ್ಷಣವು ಹೀಗಿರಬೇಕು.

೧೨ ಈ ಶಿಕ್ಷಣವು ಹೆಚ್ಚಾಗಿ ಗ್ರಂಥಗಳನ್ನವಲಂಬಿಸಿ ಇರಕೂಡದು. ಗ್ರಂಥಗಳು ಬೇಕಾಗುವದೆ ಇಲ್ಲ, ಇರಲೇಕೂಡದೆಂದು ನಾವು ಅಭಿಪ್ರಾಯ ಪಡುವದಿಲ್ಲ. ಆದರೆ ವಾಚನಕ್ಕಿಂತಲೂ ಶ್ರವಣ, ದರ್ಶನ ಮತ್ತು ಕ್ರಿಯೆಯ ಮುಖಾಂತರವಾಗಿಯೆ ವಿಶೇಷವಾಗಿ ಶಿಕ್ಷಣವು ಕೊಡಲ್ಪಡತಕ್ಕದ್ದು.

## ೪ ಉದ್ಯೋಗಮುಖಾಂತರ ಶಿಕ್ಷಣ

೧ ಶಿಕ್ಷಣದ ಪ್ರಾರಂಭವು ಅಕ್ಷರಜ್ಞಾನದಿಂದ ಆಗದೆ ಔದ್ಯೋಗಿಕ ಶಿಕ್ಷಣದಿಂದ, ಅದರ ಮುಖಾಂತರ ಆಗಬೇಕು. ಯಾವ ಉದ್ಯೋಗಗಳಿಂದ ಉದರನಿರ್ವಾಹವು ಸುಸೂತ್ರವಾಗಿ ಸಾಗುವದೊ ಅವುಗಳ ಬಗ್ಗೆ ಬಾಲಕರಿಗೆ ಚಿಕ್ಕಂದಿನಿಂದಲೆ ಜ್ಞಾನವನ್ನು ಮಾಡಿಕೊಡತಕ್ಕದ್ದು.

೨ ಉದ್ಯೋಗವು ಉದರನಿರ್ವಾಹವನ್ನು ಸಾಗಿಸಬಲ್ಲದ್ದು, ಜನರ ಜೀವನಕ್ಕೆ ಉಪಯುಕ್ತವಾದ ವಸ್ತುವನ್ನು ನಿರ್ಮಾಣಮಾಡುವಂತಹದು ಇರಬೇಕು.

೩ ಆಯಾ ವಸ್ತುವಿನ ಉತ್ಪಾದನ ಮಾಡಿಸುತಿರುವಾಗಲೆ ಹುಡುಗರಿಗೆ ಆಯಾ ಉದ್ಯೋಗಕ್ಕೆ ಸಂಬಂಧಿಸಿದ ಗಣಿತ, ಸಾಹಿತ್ಯ, ವಿಜ್ಞಾನ, ಚಿತ್ರಕಲೆ ಇತಿಹಾಸ, ಭೂಗೋಲ ಇತ್ಯಾದಿ ವಿಷಯಗಳ ಜ್ಞಾನ ಮಾಡಿಕೊಡಬೇಕು. ಈ ರೀತಿ ಉದ್ಯೋಗವು ಶಿಕ್ಷಣದ ಕೇವಲ ಒಂದು ವಿಷಯವಾಗದೆ ಎಲ್ಲ ಶಿಕ್ಷಣದ ಮತ್ತು ಮನೋವಿಕಾಸದ ಮಾಧ್ಯಮವಾಗಬೇಕು.

೪ ಈ ಉದ್ಯೋಗವುಖಾಂತರ ಶಿಕ್ಷಣಕೊಡುವ ಸಂಸ್ಥೆ ತಕ್ಕಮಟ್ಟಿಗಾದರೂ ಸ್ವಾವಲಂಬಿಯಾಗುವ ವರೆಗೆ ಆ ಸಂಸ್ಥೆ ಇಲ್ಲವೆ ವಿದ್ಯಾರ್ಥಿಗಳು ಸಾಕಷ್ಟು ಪ್ರಗತಿ ಹೊಂದಿದರು ಎಂದು ಹೇಳಲಾಗುವದಿಲ್ಲ. ಪ್ರತಿಯೊಬ್ಬನ ಪ್ರತಿಯೊಂದು ಕ್ಷಣವು ಉಪಯುಕ್ತ ವಸ್ತುನಿರ್ಮಾಣದಲ್ಲಿ ಕಳೆಯಲಿಕ್ಕೆ ಬೇಕೆಂಬ ಮುಖ್ಯ ತತ್ವದ ಜ್ಞಾನದಿಂದ ಕಾರ್ಯ ನಡೆದರೆ ಆರ್ಥಿಕ ಉತ್ಪನ್ನವು ಆಗಿಯೆ ತೀರಲಿಕ್ಕೆಬೇಕೆಂದು ಗಾಂಧೀಜಿಯವರ ಮತ.

೫ ಒಕ್ಕಲತನ ಮತ್ತು ವಸ್ತ್ರದ ಉದ್ಯೋಗ ಇವೆರಡೂ ಹಿಂದುಸ್ತಾನದ ರಾಷ್ಟ್ರೀಯ ಉದ್ಯೋಗಗಳು. ಆದ್ದರಿಂದ ಇವೆರಡೂ ಉದ್ಯೋಗಗಳ ಪ್ರಾಥಮಿಕ ಜ್ಞಾನವನ್ನು ಮಾಡಿಕೊಡುವದಕ್ಕೆ ಪ್ರತಿಯೊಂದು ಪಾಠಶಾಲೆಯಲ್ಲಿಯೂ ಅನುಕೂಲತೆಗಳು ಇರತಕ್ಕದ್ದು.

೬ ಇವೆರಡೂ ಉದ್ಯೋಗಗಳ ಪ್ರಾಥಮಿಕ ಜ್ಞಾನವನ್ನು ಸರ್ವರೂ ಸಂಪಾದಿಸುವದು ಅವಶ್ಯವಿದೆ. ಏಕೆಂದರೆ ಇವುಗಳಿಂದ ಉಪಜೀವನ ಮಾಡುವ ಇಚ್ಛೆಯಿರದವರಿಗೂ ಪೂರ್ಣ ಶಿಕ್ಷಣ ಮತ್ತು ಇಂದ್ರಿಯಶಿಕ್ಷಣದ ದೃಷ್ಟಿಯಿಂದಲೂ ಈ ಜ್ಞಾನವು ಅತ್ಯಂತ ಮಹತ್ವವುಳ್ಳದ್ದಾಗಿದೆ.

೭ ಒಕ್ಕಲತನ ಮತ್ತು ವಸ್ತ್ರದ ಉದ್ಯೋಗಗಳಿಗೆ ಬಡಿಗತನ, ಕಮ್ಮಾರಿಕೆ, ಬಣ್ಣಗಾರಿಕೆ ಮುಂತಾದ ಉದ್ಯೋಗಗಳ ಸಹಾಯವೂ ಬೇಕು. ಅದಕ್ಕಾಗಿ ಪ್ರತಿಯೊಬ್ಬ ಒಕ್ಕಲಿಗನಿಗೂ ನೇಕಾರನಿಗೂ ಇವುಗಳ ಸಾಮಾನ್ಯ ಜ್ಞಾನವನ್ನು ಮಾಡಿಕೊಡಬೇಕು.

೮ ಕಬ್ಬು, ನೀಲಿ, ಎಣ್ಣೆಕಾಳುಗಳ ಒಕ್ಕಲತನ, ಸುತ್ತುಮುತ್ತಲು ಇದ್ದ ಅರಣ್ಯದಲ್ಲಿ ದೊರೆಯುವ ವನಸ್ಪತಿ ಇವುಗಳ ಉಪಯೋಗ ಮುಂತಾದ ಅನೇಕ ತರದ ಉದ್ಯೋಗಗಳನ್ನು ಶೋಧಿಸಿ ಅರಳಿಸಬಹುದು, ಬೆಳೆಸಬಹುದು. ಈ ಉದ್ಯೋಗಗಳ ಶಿಕ್ಷಣವನ್ನು ಅಲ್ಲಿಯೆ ಕೊಡತಕ್ಕದ್ದು.

## ೫ ಮಕ್ಕಳ ಶಿಕ್ಷಣ

೧ ಮಕ್ಕಳ ಶಿಕ್ಷಣವು ಅಕ್ಷರಜ್ಞಾನದಿಂದ ಪ್ರಾರಂಭವಾಗತಕ್ಕದ್ದಲ್ಲ, ಸ್ವಚ್ಛತೆಯಿಂದ ಪ್ರಾರಂಭವಾಗತಕ್ಕದ್ದು.

೨ ಮಕ್ಕಳ ಶಿಕ್ಷಕನು ( ಅಥವಾ ಶಿಕ್ಷಿಕೆಯು ) ಮಕ್ಕಳಿಗೆ ವರ್ಣಮಾಲೆಯನ್ನು ಕಲಿಸಲು ಹಾತೊರೆಯಕೂಡದು. ಅವರಿಗೆ ತಮ್ಮ ಕೈಕಾಲು,

ಮೂಗು, ಕಣ್ಣು, ಹಲ್ಲು, ಉಗರು ಮುಂತಾದವುಗಳನ್ನು ಸ್ವಚ್ಛವಿಟ್ಟುಕೊಳ್ಳುವದಕ್ಕೂ ಜಳಕಮಾಡುವದಕ್ಕೂ ವಸ್ತ್ರಗಳನ್ನು ನಿರ್ಮಲಮಾಡುವದಕ್ಕೂ ಕರ-ವಸ್ತ್ರದಿಂದಲೆ ಮೂಗು ಮುಂತಾದ ಅವಯವಗಳನ್ನು ಒರೆಸಿಕೊಳ್ಳುವದಕ್ಕೂ ಕಲಿಸತಕ್ಕದ್ದು.

೩ ಆ ಮೇಲೆ ಶಿಕ್ಷಕನು ಮಕ್ಕಳ ಕೈಯಲ್ಲಿ ಕದರುಂಡಿಗೆ ( ತಕಲಿ ) ಮತ್ತು ರಾಟಿ (ಚರಕ) ಯನ್ನು ಕೊಟ್ಟು ನೂಲುವದಕ್ಕೆ ಬೇಕಾಗುವ ಎಲ್ಲ ಕ್ರಿಯೆಗಳನ್ನು ಸಮಾಧಾನದಿಂದ ಕಲಿಸುವನು ಮತ್ತು ಅವರಿಗೆ ಇದರ ಅಭ್ಯಾಸ ಮಾಡಿಸುವನು.

೪ ಅವರಿಗೆ ಓದುಬರಹ ಬರುವ ತನಕ ಅವರನ್ನು ಅಜ್ಞಾನದಲ್ಲಿಡುವದಿಲ್ಲ. ಆದರೆ ಚಿಕ್ಕ ಕತೆಗಳ ಮುಖಾಂತರ ಇತಿಹಾಸ, ಭೂಗೋಲಗಳ ಜ್ಞಾನವನ್ನೂ ಕತೆ-ಭಜನೆಯ ಮುಖಾಂತರ ಧರ್ಮದ ಜ್ಞಾನವನ್ನೂ ಪ್ರತ್ಯಕ್ಷ ವಸ್ತುಗಳನ್ನು ತೋರಿಸಿ ಪದಾರ್ಥವಿಜ್ಞಾನದ ಜ್ಞಾನವನ್ನೂ ವನಸ್ಪತಿ, ಭೂಮಿ, ಆಕಾಶಗಳ ಜ್ಞಾನವನ್ನೂ ಮಾಡಿಕೊಡುವನು; ಪ್ರತ್ಯಕ್ಷ ಪದಾರ್ಥಗಳ ಮುಖಾಂತರ ಅಂಕಗಣಿತವನ್ನು ಕಲಿಸುವನು. ಈ ರೀತಿ ಓದುಬರಹ ಬರುವ ತನಕ ಕನ್ನಡ ಮೂರನೆ ನಾಲ್ಕನೆ ತರಗತಿಯ ವರೆಗಿನ ಜ್ಞಾನವನ್ನು ಮಾಡಿ ಕೊಡುವನು.

೫ ಇದಲ್ಲದೆ ಅಕ್ಷರಗಳನ್ನು ಬರೆಸುವ ಪೂರ್ವದಲ್ಲಿ ಅವರಿಗೆ ಚಿತ್ರಗಳನ್ನೂ ಸುಳುವುಗಳನ್ನೂ ಬರೆಯಲು ಕಲಿಸುವನು ಮತ್ತು ತಮ್ಮ ವಿಚಾರಗಳನ್ನು ಚಿತ್ರಗಳ ಮುಖಾಂತರವಾಗಿಯೆ ತಿಳಿಸಲು ಕಲಿಸುವನು.

೬ ಅನೇಕ ಭಜನೆಯ ಪದಗಳನ್ನೂ ಶ್ಲೋಕಗಳನ್ನೂ ಕವಿತೆಗಳನ್ನೂ ಮುಖೋದ್ಗತ ಮಾಡಿಸುವನು, ಉಚ್ಚಾರವನ್ನು ತಿದ್ದುವನು ಅಲ್ಲದೆ ನಾನಾ ಬಗೆಯ ಸಾಹಿತ್ಯವನ್ನು ಕಂಠಸ್ಥ ಮಾಡಿಸುವನು.

೭ ತದನಂತರ ಮಕ್ಕಳಿಗೆ ಸುಂದರವಾಗಿಯೂ ಸ್ಪಷ್ಟವಾಗಿಯೂ ಅಕ್ಷರಗಳನ್ನು ಬರೆಯಲು ಕಲಿಸುವನು. ಇಷ್ಟು ತಡಮಾಡಿ ಅಕ್ಷರಜ್ಞಾನ ಮಾಡಿಸುವದರಿಂದ ಮಕ್ಕಳ ಸಮಯ್ವನ್ನು ನಷ್ಟಪಡಿಸಿದಂತಾಗುವದಿಲ್ಲವೆಂದು ಅನು-ಭವವಾಗುವದು.

## ೬ ಹಳ್ಳಿಗರ ಶಿಕ್ಷಣ

೧ ಅಕ್ಷರಜ್ಞಾನ ಸಂಪಾದಿಸಿದ ಮೇಲೆಯೆ ಶಿಕ್ಷಣ ಹೊಂದಬಹುದು

ಎಂಬ ಸಂಶಯುವನ್ನು ಹಳ್ಳಿಗಳ ವಯೋವೃದ್ಧ ಜನರು ಬಿಟ್ಟುಬಿಡುವದು ಅವಶ್ಯವಾದದ್ದು.

೨ ಶಕ್ತಿ, ಉತ್ಸಾಹವಿದ್ದ ಮನುಷ್ಯರಿಗೆ ಅಕ್ಷರಜ್ಞಾನವನ್ನು ಮಾಡಿಕೊಡಲು ಪ್ರಯತ್ನಿಸುವದು ಇಷ್ಟವಾದದ್ದು. ಇದಕ್ಕೋಸ್ಕರವಾಗಿ ಅವರಿಗೆ ಉತ್ತೇಜನವನ್ನೂ ಕೊಡತಕ್ಕದ್ದು ಮತ್ತು ಅವರಿಗಾಗಿ ಸಾಕಷ್ಟು ಹೆಚ್ಚು ಅನುಕೂಲತೆಗಳನ್ನೂ ಮಾಡಿಕೊಡತಕ್ಕದ್ದು.

೩ ಇಳಿವಯಸ್ಸಿನಲ್ಲಿ ಓದುಬರಹ ಕಲಿಯುವ ಇಚ್ಛೆಯಾಗುವದು ಕಠಿಣ, ಆದರೆ ಇಂಥವರು ಪ್ರೌಢರ ಪಾಠಶಾಲೆಗೆ ಬರಲೇಕೂಡದೆಂದು ನಿಯಮವಿರಕೂಡದು.

೪ ಹಳ್ಳಿಗಳ ಪುಸ್ತಕಭಾಂಡಾರವು ಚಿಕ್ಕದೆ ಇರಬಲ್ಲದು. ಹಳ್ಳಿಗರಲ್ಲಿ ಪುಸ್ತಕಗಳನ್ನು ಕೊಳ್ಳುವ ಶಕ್ತಿಯು ಅತ್ಯಲ್ಪವಿರುವದು; ಸ್ವಲ್ಪ ಹೆಚ್ಚು ಕಡಿಮೆ ಓದುಬರಹ ಬಂದಕೂಡಲೆ ಅವರು ತಮ್ಮ ಜ್ಞಾನಭಾಂಡಾರವನ್ನು ತಾವೇ ಬೆಳೆಸಿಕೊಳ್ಳಲು ಸಮರ್ಥರಾಗುತ್ತಾರೆಂಬ ಅನುಭವ ಬಂದಿಲ್ಲ.

೫ ಆದ್ದರಿಂದ, ಶಿಕ್ಷಿತರು ಇತರರಿಗೆ ಓದಿ ತೋರಿಸಿ, ತಿಳಿಸಿ ಮತ್ತು ವ್ಯಾಖ್ಯಾನಗಳನ್ನು ಕೊಟ್ಟು ಕಲಿಸಿದರೆ ಕಲಿತವರು ಎಷ್ಟು ಜ್ಞಾನವನ್ನು ಸಂಪಾದಿಸಿಕೊಳ್ಳಬಲ್ಲರೊ ಅಷ್ಟೇ ಓದುಬರಹ ಬರದ ಹಳ್ಳಿಗನೂ ಜ್ಞಾನವನ್ನು ಸಂಪಾದಿಸಿಕೊಳ್ಳಬಲ್ಲನು.

೬ ಓದುಬರಹ ಬಂದಾಕ್ಷಣಕ್ಕೆ ಅರಿತುಕೊಳ್ಳುವ ಶಕ್ತಿಯು ವೃದ್ಧಿಹೊಂದುತ್ತದೆಂದು ಹೇಳಲಾಗುವದಿಲ್ಲ. ಎಷ್ಟೋ ಸಲ ಶ್ರವಣದಿಂದ ಸಂಪಾದಿಸಿದ ಹಳ್ಳಿಗನ ಜ್ಞಾನವು ಶಿಕ್ಷಿತನ ಜ್ಞಾನಕ್ಕಿಂತಲೂ ಮಿಗಿಲಾಗಿರುವದೆಂದು ಕಂಡುಬರುತ್ತದೆ.

೭ ಜ್ಞಾನದ ಝರಿಯು ಪುಸ್ತಕಗಳಲ್ಲಿ ಇಲ್ಲ, ಆದರೆ ಅವಲೋಕನ, ಅನುಭವ ಮತ್ತು ವಿಚಾರಶಕ್ತಿಯಲ್ಲಿರುವದು. ಈ ಮಾತನ್ನು ನಾವು ಮರೆತುಬಿಟ್ಟಿರುವದರಿಂದ ಪುಸ್ತಕಗಳ ಜ್ಞಾನಕ್ಕೆ ಹೆಚ್ಚು ಮಹತ್ವವನ್ನು ಕೊಟ್ಟು ಅವನ್ನೇ ಅವಲಂಬಿಸಿದ್ದೇವೆ.

## ೭ ಸ್ತ್ರೀಶಿಕ್ಷಣ

೧ ಪುರುಷರಂತೆಯೆ ಶಿಕ್ಷಣವನ್ನು ಪಡೆಯಲು ಸ್ತ್ರೀಯರಿಗೂ ಸಂಪೂರ್ಣ ಅಧಿಕಾರವುಂಟು. ಶಿಕ್ಷಣ ಪಡೆಯುವದಕ್ಕಾಗಿ ಪುರುಷರಿಗೆ ಅನುಕೂಲತೆಗಳು ಇರುವಂತೆಯೆ ಸ್ತ್ರೀಯರಿಗೂ ಇರತಕ್ಕದ್ದು.

೨ ಪುರುಷನಿಗಿಂತಲೂ ಸ್ತ್ರೀಯ ತರಗತಿಯು ಮತ್ತು ಅಧಿಕಾರವು ಕಡಿಮೆ ಇರುವದು, ಎಂಬ ಕಲ್ಪನೆಯನ್ನು ನಿರ್ಮೂಲ ಮಾಡುವದು ಒಳಿತು.

೩ ಪುರುಷರಂತೆಯೆ ಶಿಕ್ಷಣವನ್ನು ಪಡೆಯಲು ಸ್ತ್ರೀಯರಿಗೆ ಬಂಧನವಿರ ಕೂಡದು. ಆದರೆ ಶೇಕಡಾ ೯೯ ಸ್ತ್ರೀಯರು ಮಾತೃಪದವನ್ನು ಪಡೆಯ ಬೇಕಾಗುವದೆಂಬದನ್ನು ಲಕ್ಷ್ಯದಲ್ಲಿಟ್ಟುಕೊಂಡು ಸ್ತ್ರೀ-ಶಿಕ್ಷಣದ ಏರ್ಪಾಟು ಮಾಡತಕ್ಕದ್ದು.

೪ ಯಾರು ಒಕ್ಕಲಿಗರೂ ನೇಕಾರರೂ ಆಗಬೇಕಾಗಿರುವದಿಲ್ಲವೊ ಅಂಥ ಜನರಿಗೂ ಹೇಗೆ ಆ ಧಂದೆಗಳ ಪ್ರಾಥಮಿಕ ಜ್ಞಾನವಿರುವದು ಒಳ್ಳೆಯದೊ ಹಾಗೆಯೆ ಮಾತೃಪದವನ್ನು ಯಾವ ಸ್ತ್ರೀಯು ಪಡೆಯಬೇಕಾಗಿಲ್ಲವೊ ಮನೆ ತನವನ್ನು ನಡೆಸಿಕೊಂಡು ಹೋಗಬೇಕಾಗಿಲ್ಲವೊ ಅಂಥವಳಿಗೂ ಮಾತೃತ್ವದ ಶಿಕ್ಷಣವನ್ನೂ ಗೃಹಕರ್ಮದ ಶಿಕ್ಷಣವನ್ನೂ ಕೊಡುವದು ಒಳಿತು.

## ೮ ಧಾರ್ಮಿಕ ಶಿಕ್ಷಣ

೧ ಧಾರ್ಮಿಕ ಶಿಕ್ಷಣವಿಲ್ಲದ ಶಿಕ್ಷಣಕ್ರಮವು ಶಿಕ್ಷಣವೆನಿಸಿಕೊಳ್ಳಲಿಕ್ಕೆ ಯೋಗ್ಯವಿರುವದಿಲ್ಲ.

೨ ಯಾವ ಬಾಲಕನು ಯಾವ ಧರ್ಮದಲ್ಲಿ ಜನ್ಮವೆತ್ತುವನೊ ಅವನಿಗೆ ಆ ಧರ್ಮದ ಮುಖ್ಯ ಗ್ರಂಥಗಳ, ಮಹಾಪುರುಷರ, ಸಾಧುಸಂತರ, ಆ ಧರ್ಮದ ಮುಖ್ಯ ಸಿದ್ಧಾಂತಗಳ ವಿಷಯದ ಶ್ರದ್ಧಾಪುರಸ್ಸರ ಜ್ಞಾನವನ್ನು ಮಾಡಿ ಕೊಡತಕ್ಕದ್ದು.

೩ ಇಲ್ಲಿ ವೈದಿಕ, ಮುಸಲ್ಮಾನ, ಕ್ರಿಸ್ತೀ, ಯಹುದೀ, ಪಾರಸೀ, ಶೀಖ, ಜೈನ, ಬುದ್ಧ ಮುಂತಾದ ಮುಖ್ಯ ಧರ್ಮಗಳೆ ಧರ್ಮವೆಂದು ತಿಳಿಯತಕ್ಕದ್ದು; ಆದರೆ ಈ ಧರ್ಮಗಳಿಂದ ಉದ್ಭವಿಸಿದ ಸಂಪ್ರದಾಯಗಳು, ಉಪಶಾಖೆಗಳು ಧರ್ಮವೆಂದು ತಿಳಿಯತಕ್ಕದ್ದಲ್ಲ. ಸಂಪ್ರದಾಯದ ಮತ್ತು ಉಪಶಾಖೆಗಳ ಸಂಸ್ಕಾರವು ಆಯಾಸಂಪ್ರದಾಯಾದಿಗಳ ಸಂಸ್ಥೆಗಳಿಂದಲೆ ದೊರೆಯಬಲ್ಲದು.

೪ ಬಾಲಕನಿಗೆ ಅವನ ಧರ್ಮದ ಹೊರತು ಉಳಿದ ಮಹಾನ್ ಧರ್ಮಗಳ ಸಾಮಾನ್ಯ ಜ್ಞಾನವನ್ನೂ ಸಮಭಾವನೆಯಿಂದ ಕೊಡಿಸಲು ಯತ್ನಿಸಬೇಕು.

೫ ಮನುಷ್ಯನ ಶರೀರರಕ್ಷಣೆಗಾಗಿ ಆಹಾರ, ಶ್ರಮ ಮತ್ತು ವಿಶ್ರಾಂತಿ ಅವಶ್ಯವಾಗಿ ಬೇಕಾಗುವಂತೆ ಚಿತ್ತದ ಉನ್ನತಿಗಾಗಿ ಧರ್ಮದ ಆಧಾರವು

ಬೇಕು. ಪ್ರತಿಯೊಂದು ಧರ್ಮವೂ ಇಂಥ ಆಧಾರವನ್ನೀಯಬಲ್ಲದು. ಆದ್ದರಿಂದ ಯಾರಿಗೂ ಧರ್ಮಾಂತರ ಮಾಡುವ ಆವಶ್ಯಕತೆಯೆ ಬೀಳುವದಿಲ್ಲ. ಪ್ರತಿಯೊಂದು ಧರ್ಮದ ಪ್ರಚಾರವು ಮನುಷ್ಯನಿಂದಲೆ ಆಗಿರುವದು. ಆದ್ದರಿಂದ ಅದರಲ್ಲಿ ದೋಷಗಳು ಇದ್ದೇ ಇರುವವು ಮತ್ತು ಅನೇಕ ದೋಷಗಳು ಆಗಾಗ್ಗೆ ಉಂಟಾಗುತ್ತಿರುವವು. ಆಗಾಗ್ಗೆ ಆ ದೋಷಗಳನ್ನು ಪರಿಹರಿಸಿ ಅವನ್ನು ಪರಿಶುದ್ಧಮಾಡಬೇಕಾಗುತ್ತದೆ. ಹೀಗಿದ್ದಾಗ್ಯೂ ಯಾವ ಧರ್ಮವೂ ಸರ್ವಥಾ ತ್ಯಾಜ್ಯವಿರುವದಿಲ್ಲ. ಧಾರ್ಮಿಕ ಶಿಕ್ಷಣದಿಂದ ಮೇಲಿನ ಸಂಸ್ಕಾರವು ನಿರ್ಮಾಣವಾಗುವಂತೆ ಯತ್ನಿಸತಕ್ಕದ್ದು.

೬ ಭಿನ್ನ ಭಿನ್ನ ಮಾನವಸಮಾಜಗಳಲ್ಲಿ ಭಿನ್ನ ಭಿನ್ನ ಧರ್ಮಗಳು ಹುಟ್ಟಿರುವದರಿಂದ ಅವುಗಳಲ್ಲಿಯ ಸಮಾಜರಚನೆ, ವಿಧಿವಿಧಾನ ಮತ್ತು ರೂಢಿ ಇವುಗಳಲ್ಲಿ ಪರಸ್ಪರ ವಿರೋಧಿಯೆನಿಸುವ ಭೇದಗಳು ಇದ್ದರೂ ಪ್ರತಿಯೊಂದು ಧರ್ಮದಲ್ಲಿ ಸತ್ಯರೂಪೀ ಪರಮಾತ್ಮನ ಶೋಧ ಮತ್ತು ಅವನ ಆಧಾರ, ನೀತಿಪರಾಯಣ ಮತ್ತು ಸಂಯಮೀ ಜೀವನ, ಪರರಿಗೋಸ್ಕರ ತಾವು ಸವೆದುಹೋಗಬೇಕು, ಸ್ವಾರ್ಥಕ್ಕಿಂತಲೂ ಪರರಹಿತವನ್ನು ಸಾಧಿಸಬೇಕು ಎನ್ನುವ ವೃತ್ತಿ ಇವು ಎಲ್ಲ ಧಾರ್ಮಿಕ ಜೀವನದ ಸಾಮಾನ್ಯ ಅಂಗಗಳಾಗಿರುತ್ತವೆ. ದೊಡ್ಡ ಕ್ಷೇತ್ರದಲ್ಲಿ ಈ ಸಂಸ್ಕಾರಗಳು ಯಾವಾಗಲೂ ಹೊಂದುವ ವಿಕಾಸವೆ ಧಾರ್ಮಿಕ ಜೀವನವಿಕಾಸವು. ಆದ್ದರಿಂದ ಧಾರ್ಮಿಕ ಶಿಕ್ಷಣದಲ್ಲಿ ಈ ಅಂಗಗಳ ಮಹತ್ವವನ್ನು ತಿಳಿಸಿ, ಬಾಹ್ಯ ಭೇದಗಳು ಗೌಣವೆಂದು ಅರಿತುಕೊಳ್ಳಲು ಎಲ್ಲರಿಗೂ ಕಲಿಸತಕ್ಕದ್ದು.

## ೯ ಶಿಕ್ಷಣದ ಮಾಧ್ಯಮ

೧ ಉಚ್ಚಾತಿಉಚ್ಚ ಶಿಕ್ಷಣವು ಕೂಡ ಸ್ವಭಾಷಾಮೂಲಕವಾಗಿಯೆ ಕೊಡಲ್ಪಡತಕ್ಕದ್ದು.

೨ ಇಂಗ್ರೇಜಿಯಂಥ ಅತ್ಯಂತ ಪರದೇಶೀ ಭಾಷೆಯನ್ನು ಶಿಕ್ಷಣದ ಬೋಧಭಾಷೆಯನ್ನಾಗಿ ಮಾಡಿಕೊಂಡು ನಾವು ಶಿಕ್ಷಣಕ್ಕಾಗಿ ಪಟ್ಟ ಹಾಗೂ ಪಡುತ್ತಿರುವ ಪರಿಶ್ರಮವು ವ್ಯರ್ಥವಾಗಿದೆ ಹಾಗೂ ವ್ಯರ್ಥವಾಗುತ್ತಿರುವದು.

೩ ಇಂಗ್ರೇಜಿಯ ಜ್ಞಾನದ ವಿನಾ ಉಚ್ಚ ಶಿಕ್ಷಣವನ್ನು ಪಡೆಯಲಾಗುವದೆ ಇಲ್ಲ, ಎಂಬುದು ಈಗಿನ ಸ್ಥಿತಿಯು. ಇದು ದಯಾಜನಕವೂ ಲಜ್ಜಾಸ್ಪದವೂ ಆಗಿದೆ.

೪ ಶಿಕ್ಷಣವು ಇನ್ನೂ ಮನೆಮನೆಗೆ ಹಳ್ಳಿಹಳ್ಳಿಗೆ ಮುಟ್ಟಿಲ್ಲ. ಸ್ವಭಾಷೆಯ ಮೂಲಕ ಶಿಕ್ಷಣವು ಕೊಡಲ್ಪಡುತ್ತಿರುವದಿಲ್ಲ, ಇದೇ ಹೀಗಾಗಿರುವ ಮುಖ್ಯ ಕಾರಣವು.

೫ ಇಂಗ್ರೇಜಿ ಭಾಷೆಯೆ ಶಿಕ್ಷಣದ ಮಾಧ್ಯಮಿಕವೆಂದು ನಿರ್ಧರಿಸಲ್ಪಟ್ಟದ್ದರಿಂದ ದೇಶೀ ಭಾಷೆಗಳ ಉನ್ನತಿಯು ಆಗಿರುವದಿಲ್ಲ. ಇಂಗ್ರೇಜೀ ಭಾಷೆಯಲ್ಲಿದ್ದ ವಿಚಾರಗಳನ್ನು ಸಂಸ್ಕೃತದಲ್ಲಾಗಲಿ ಪಾರಸಿಯಲ್ಲಾಗಲಿ ಅನುವಾದಿಸಿ ಸ್ವಭಾಷೆಯ ಪ್ರತ್ಯಯಗಳನ್ನು ಹಚ್ಚಿ ಮಾಡುವ ಸೇವೆಯೆ ಶಿಕ್ಷಿತರು ಮಾಡುವ ಸ್ವಭಾಷಾಸೇವೆಯೆನಿಸಿರುವದು. ಆದ್ದರಿಂದಲೆ ಈ ಸಾಹಿತ್ಯವು ಸಾಮಾನ್ಯ ಜನತೆಯಲ್ಲಿ ಪ್ರಚಾರವಾಗಿಲ್ಲ ಮತ್ತು ಅದರಿಂದ ಯಾವ ಪರಿಣಾಮವೂ ಆಗಿಲ್ಲ.

೬ ಪರಭಾಷೆಯು ಶಿಕ್ಷಣದ ಮಾಧ್ಯಮವಾಗಿದ್ದರಿಂದ ಇನ್ನೂ ಒಂದು ದುಷ್ಪರಿಣಾಮವಾಗಿರುವದೇನಂದರೆ ಎಷ್ಟೋ ಶಿಕ್ಷಿತರು ಇಂಗ್ರೇಜಿಯಲ್ಲಿಯೆ ವಿಚಾರ ಮಾಡಬಲ್ಲರು, ಆದರೆ ಸ್ವಭಾಷೆಯಲ್ಲಿ ವಿಚಾರ ಮಾಡಲಾರರು. ಇದು ಖೇದಕರವಾದ ಸ್ಥಿತಿಯು.

೭ ಗುಜರಾತ ವಿದ್ಯಾಪೀಠದಂಥ ಚಿಕ್ಕ ಶಿಕ್ಷಣಸಂಸ್ಥೆಯಲ್ಲಿ ಶಿಕ್ಷಣದ ಮಾಧ್ಯಮ ಗುಜರಾತಿ ಮಾಡಿದ್ದರಿಂದ ಗುಜರಾತೀ ಸಾಹಿತ್ಯದಲ್ಲಿ ಎಷ್ಟು ಪ್ರಗತಿಯಾಗಿರುವದೆನ್ನುವದು ಕೆಲವು ವರ್ಷಗಳ ಗುಜರಾತೀ ಸಾಹಿತ್ಯದ ಇತಿಹಾಸದಿಂದ ಮನವರಿಕೆಯಾಗುವದು.

೮ ಲೋಕಮಾನ್ಯರು ಮರಾಠಿ ಭಾಷೆಯ ಮುಖಾಂತರವಾಗಿಯೆ ತಮ್ಮ ಪ್ರಾಂತದ ಸೇವೆ ಮಾಡಿದ್ದರಿಂದ ಮರಾಠಿ ಭಾಷೆಯ ಸಾಹಿತ್ಯವು ಬಹಳ ಸಮೃದ್ಧವಾಗಿರುವದು, ಇದು ಈ ವಿಷಯದಲ್ಲಿ ಸಾಕ್ಷಿಯಾಗಿದೆ.

## ೧೦ ಇಂಗ್ರೇಜಿ ಭಾಷೆ

೧ ಇಂಗ್ರೇಜಿ ಭಾಷೆಯ ಜ್ಞಾನವನ್ನು ಸಂಪಾದಿಸಿದ ಹೊರತು ಶಿಕ್ಷಣವು ಪೂರ್ತಿಯಾಗುವದಿಲ್ಲ ಎಂಬ ತಿಳಿವಳಿಕೆ ಇರುತ್ತದೆ, ಇದನ್ನು ದೂರ ಮಾಡುವದು ಅವಶ್ಯವಿದೆ.

೨ ಇಂಗ್ರೇಜಿ ಭಾಷೆಯ ವಿಶಾಲ ಸಾಹಿತ್ಯದಲ್ಲಿದ್ದ ಸುಂದರವಾದ ರತ್ನಗಳನ್ನು ಆರಿಸಿ ತಮ್ಮ ತಮ್ಮ ಭಾಷೆಗೆ ಪರಿವರ್ತಿಸುವದು ಇಂಗ್ರೇಜಿ ಭಾಷಾ

ಜ್ಞಾನಿಗಳದೊಂದು ಕರ್ತವ್ಯವಾಗಿರುತ್ತದೆ. ಈ ರತ್ನಗಳ ಆನಂದವನ್ನು ಪಡೆಯಲು ಕೋಟ್ಯಂತರ ಜನರನ್ನು ಇಂಗ್ರೇಜೀ ಕಲಿಯಬೇಕೆನ್ನುವ ಹವ್ಯಾಸದಲ್ಲಿ ತೊಡಕಿಸುವದು ಕ್ರೂರತೆಯಾಗಿರುವದು.

೩ ಇಂಗ್ರೇಜೀ ಭಾಷೆಯು ವ್ಯವಹಾರಕ್ಕೆ ಹೆಚ್ಚಾಗಿ ಬೇಕೆನ್ನುವದು ನಿಜವು; ಆದರೆ ಇಂಥ ವ್ಯವಹಾರವನ್ನು ಕೇವಲ ಸ್ವಲ್ಪ ಜನರೆ ಮಾಡಬೇಕಾಗುವದು. ಮೇಲಾಗಿ ಈ ಜನರು ಮಾಡುವ ವ್ಯವಹಾರದ ಬಹುಭಾಗವು ನಿಷ್ಕಾರಣವಾಗಿ ಇಂಗ್ರೇಜಿಯಲ್ಲಿ ಆಗುವದಲ್ಲದೆ ನಮ್ಮ ದಾಸ್ಯದಿಂದಲೆ ಆ ವ್ಯವಹಾರವು ಹಾಗೆ ಆಗುತ್ತದೆ. ಕೆಲವು ಇಂಗ್ಲೀಷು ಜನರಿಗೆ ನಮ್ಮ ದೇಶೀಯ ಭಾಷೆಗಳನ್ನು ಕಲಿಯುವ ತೊಂದರೆಯಾಗಬಾರದೆಂದು ಇಡೀ ಪ್ರಜರ ಮೇಲೆ ಇಂಗ್ಲೀಷ ಶಿಕ್ಷಣದ ಭಾರ ಹೊರಿಸುವದು ಕೂಡ ನಮ್ಮ ದೇಶವು ಬ್ರಿಟಿಶ ರಾಜ್ಯಕ್ಕೆ ಕೊಡುತ್ತಿರುವಂಥ ಒಂದು ಪ್ರಕಾರದ ಕರಭಾರವೆ ಎನಿಸುವದು.

೪ ಇಂಗ್ರೇಜೀ ಭಾಷೆಯು ಅವಶ್ಯವಾಗಿ ಕಲಿಯತಕ್ಕಂಥ ಭಾಷೆಯು ಎಂದು ನಿಯಮ ಮಾಡಿ ಬ್ರಿಟಿಶ ರಾಜ್ಯವು ತನ್ನ ತಳಹದಿಯನ್ನು ಹೆಚ್ಚು ಗಟ್ಟಿ ಮಾಡಿಕೊಂಡಿರುವದು ಮತ್ತು ಈ ಭಾಷೆಯ ದಾಸ್ಯವನ್ನು ಸ್ವೀಕಸಲು ಹಚ್ಚಿ ಪ್ರಜರನ್ನು ಶರೀರದಿಂದಷ್ಟೆ ಅಲ್ಲ ಆದರೆ ಮನದಿಂದಲೂ ಪರತಂತ್ರ ಮಾಡಿರುವದು. ಶಸ್ತ್ರಾಸ್ತ್ರಗಳನ್ನು ಕಸಿದುಕೊಂಡಿದ್ದರಿಂದ ಪ್ರಜರಿಗೆ ಆದ ಹಾನಿಗಿಂತ ಹೆಚ್ಚಿನ ಹಾನಿಯು ಇಂಗ್ಲೀಷ ಭಾಷೆಯನ್ನು ಅವರ ಮೇಲೆ ಹೇರಿದ್ದರಿಂದ ಆಗಿದೆ.

೫ ಇಂಗ್ರೇಜಿ ಭಾಷೆಯ ಜ್ಞಾನವಿಲ್ಲದೆ ದೇಶದ ಮಹತ್ವದ ಕಾರಭಾರಗಳಲ್ಲಿ ಭಾಗ ತೆಗೆದುಕೊಳ್ಳಲಿಕ್ಕೆ ಬರುವದಿಲ್ಲವೆಂದು ಕಟ್ಟುಮಾಡಿರುವದು ಶಿಕ್ಷಣದ, ಶಿಕ್ಷಣಶಾಸ್ತ್ರದ, ಹಾಗೆಯೆ ರಾಜಕಾರಣದ ದೃಷ್ಟಿಯಿಂದ ಅತ್ಯಂತ ಹಾನಿಕರವಾಗಿರುತ್ತದೆ.

೬ ಯುರೋಪಿನ ವಿದ್ಯೆಗಳನ್ನು ಕಲಿಯುವದಕ್ಕೋಸ್ಕರ ಯುರೋಪಿನ ಯಾವದಾದರೂ ಒಂದು ಭಾಷೆಯನ್ನು ಕಲಿಯುವದು ಅವಶ್ಯವಿರುವದು ಎಂದು ಒಪ್ಪಬಹುದು. ಆದರೆ ಇಂದು ನಾವು ಅದಕ್ಕಾಗಿ ಎಷ್ಟು ಸಮಯ ಕಳೆದುಕೊಳ್ಳುತ್ತೇವೊ ಮತ್ತು ಎಷ್ಟು ಪರಿಶ್ರಮಪಡುವೆವೊ ಅಷ್ಟು ಸಮಯ ಕಳೆದುಕೊಳ್ಳಲಾಗದು ಮತ್ತು ಅಷ್ಟು ಪರಿಶ್ರಮ ಕೂಡ ಮಾಡಲಾಗದು.

ಯುರೋಪಿನ ವಿದ್ಯೆಗಳನ್ನು ಕಲಿಯುವದಕ್ಕಾಗಿ ಯುರೋಪಿನ ಭಾಷೆಯು ಎಷ್ಟು ಬರತಕ್ಕದ್ದೋ ಅಷ್ಟನ್ನೇ ಕಲಿಯಬೇಕು. ಆ ಭಾಷೆಯು ತಿಳಿಯುವಷ್ಟು ಬಂದರೆ ಸಾಕೆಂಬುದೆ ಆ ಭಾಷೆಯ ವಿಷಯದಲ್ಲಿ ನಮ್ಮ ಧ್ಯೇಯವಿರಬೇಕು. ಇವತ್ತು ಇಂಗ್ರೇಜಿ ಭಾಷೆಯು ನಮ್ಮ ಮಾತೃಭಾಷೆಯಾಗಿರುವದೊ ಏನೋ ಅಥವಾ ಅದಕ್ಕಿಂತಲೂ ಹೆಚ್ಚು ಮಹತ್ವವುಳ್ಳದ್ದಿರುವದೊ ಏನೊ ಎನ್ನುಷಂತೆ ಅದರಲ್ಲಿ ಲೇಖ ಬರೆಯಲು ಮತ್ತು ಅದನ್ನು ಸರಿಯಾಗಿ ಉಚ್ಚರಿಸಲು ಕಲಿಯುವದಕ್ಕಾಗಿ ನಮ್ಮ ಭಗೀರಥಪ್ರಯತ್ನವು ನಡೆದಿರುತ್ತದೆ; ಎಷ್ಟೋ ವರ್ಷ ಸತತ ಪ್ರಯತ್ನ ಮಾಡಿದರೆ ಕೂಡ ಆ ಭಾಷೆಯಲ್ಲಿ ನಾವು ಪ್ರಭುತ್ವವನ್ನು ಪಡೆಯುವದು ಅಪರೂಪ.

೭ ನಾವು ನಮ್ಮ ಭಾಷೆಯನ್ನು ಮತ್ತು ನೆರೆಹೊರೆಯ ಪ್ರಾಂತದಲ್ಲಿ ಮಾತಾಡುವ ಭಾಷೆಯನ್ನು ಸರಿಯಾಗಿ ಮಾತಾಡಲು ಬರೆಯಲು ಬರದಿದ್ದರೆ ನಮಗೆ ನಾಚಿಕೆ ಎನಿಸುವದಿಲ್ಲ, ಆದರೆ ಇಂಗ್ರೇಜಿಯಲ್ಲಿ ತಪ್ಪುಗಳಾದರೆ ನಾಚುವೆವು ಮತ್ತು ತಪ್ಪು ಮಾಡಿದವರ ಹಾಸ್ಯ ಮಾಡುವೆವು. ಇದೆಲ್ಲವೂ ಆ ಭಾಷೆಯು ನಮ್ಮನ್ನೆಷ್ಟು ಮರುಳು ಮಾಡಿರುವದೆಂಬದನ್ನು ತೋರಿಸುವದು. ವಾಸ್ತವಿಕವಾಗಿ ನೋಡಿದರೆ, ಇಂಗ್ರೇಜಿ ಭಾಷೆಯು ಅತ್ಯಂತ ಪರಕೀಯವಾಗಿರುವದರಿಂದ ನಾವು ತಪ್ಪು ಬರೆದರೆ, ತಪ್ಪು ಉಚ್ಚರಿಸಿದರೆ ಆಶ್ಚರ್ಯಪಡತಕ್ಕಂಥ, ಹಾಸ್ಯ ಮಾಡತಕ್ಕಂಥ ಸಂಗತಿಯಲ್ಲ.

೮ ಆದರೆ ಈ ಭಾಷೆಗೆ ಮರುಳಾಗಿ ನಾವು ನಮ್ಮ ಶಿಕ್ಷಣದ ಅರ್ಧ ಸಮಯವನ್ನು ಅಥವಾ ಅದಕ್ಕೂ ಹೆಚ್ಚು ಸಮಯವನ್ನು ಈ ಭಾಷೆಯಲ್ಲ ಪ್ರಭುತ್ವವನ್ನು ಸಂಪಾದಿಸುವದಕ್ಕಾಗಿ ವೆಚ್ಚಮಾಡುತ್ತೇವೆ. ಈ ರೀತಿ ವಿದ್ಯಾರ್ಥಿಯ ಎಷ್ಟೋ ಸಮಯವೂ ಶ್ರಮವೂ ವ್ಯರ್ಥವಾಗುವದು, ದುರ್ವ್ಯಯವಾಗುವದು.

## ೧೧ ಭಾಷಾಜ್ಞಾನ

೧ ವ್ಯವಸ್ಥಿತವಾಗಿ ನಡೆಯುವ ಶಿಕ್ಷಣ ಕ್ರಮದಲ್ಲಿ ಭಾಷಾವಿಷಯಗಳಲ್ಲಿ ಸ್ವಭಾಷೆಗೆ ಪ್ರಥಮಸ್ಥಾನವು ದೊರೆಯತಕ್ಕದ್ದು. ಸ್ವಭಾಷೆಯಲ್ಲಿ ಶುದ್ಧವಾಗಿ ಓದಲಿಕ್ಕೂ ಮಾತನಾಡಲಿಕ್ಕೂ ಬರೆಯಲಿಕ್ಕೂ ಬರುವ ವರೆಗೆ ಇಂಗ್ರೇಜಿಯಂಥ ಪರಕೀಯ ಭಾಷೆಯನ್ನು ಕಲಿಯಲು ಪ್ರಾರಂಭಿಸತಕ್ಕದ್ದೆ ಅಲ್ಲ.

೨ ಸ್ವಭಾಷೆಯ ನಂತರ ದ್ವಿತೀಯ ಸ್ಥಾನವು ರಾಷ್ಟ್ರಭಾಷೆಗಾಗಿ ಇರುವದು. ಹಿಂದುಸ್ತಾನಿಯೆ ರಾಷ್ಟ್ರಭಾಷೆಯೆನಿಸುವದು. ಈ ವಿಷಯವನ್ನು ಕುರಿತು ವಿಶೇಷ ಮಾತುಗಳನ್ನು ಮುಂದೆ ಹೇಳಲಾಗುವದು.

೩ ಮೂರನೆಯ ಸ್ಥಾನವು ಮೂಲ ಭಾಷೆಗೆ ದೊರೆಯುವದು. ಹಿಂದೂ ವಿದ್ಯಾರ್ಥಿಗಳಿಗೆ ಸಂಸ್ಕೃತವು, ಮುಸಲ್ಮಾನ ವಿದ್ಯಾರ್ಥಿಗಳಿಗೋಸ್ಕರ ಅರಬೀ ಅಥವಾ ಪಾರಸೀ, ಪಾರಸೀ ವಿದ್ಯಾರ್ಥಿಗಳಿಗೋಸ್ಕರ ಪಹೇಲವಿ ಇತ್ಯಾದಿಗಳು ಮೂಲಭಾಷೆಗಳೆನಿಸುವವು. ಈ ಭಾಷೆಗಳು ಸ್ವಧರ್ಮದ ಮತ್ತು ಸ್ವಭಾಷೆಯ ತಳಹದಿಯಾಗಿರುವದರಿಂದ ಅವುಗಳ ಜ್ಞಾನವನ್ನು ಪಡೆಯುವದು ಮಹತ್ವಪೂರ್ಣವಾದದ್ದು. ಚನ್ನಾಗಿ ಶಿಕ್ಷಿತನಾದಂಥ ಮನುಷ್ಯನಿಗೆ ಅದರ ಸಾಧಾರಣ ಜ್ಞಾನವು ಇರತಕ್ಕದ್ದು.

೪ ಭಾಷೆಗಳನ್ನು ಕಲಿಯಲು ಇಚ್ಛೆ ಇದ್ದವರು, ರುಚಿ ಇದ್ದವರು ಹಿಂದುಸ್ತಾನದ ಅನ್ಯ ಪ್ರಾಂತೀಯ ಭಾಷೆಗಳನ್ನು ಕಲಿಯುವದು ಅವಶ್ಯವು. ವಿಶೇಷತಃ ದ್ರಾವಿಡ ಭಾಷೆಗಳಲ್ಲಿ ಒಂದೆರಡನ್ನು ಕಲಿಯಲು ಪ್ರಯತ್ನಿಸತಕ್ಕದ್ದು ಮತ್ತು ಸಂಸ್ಕೃತಜನ್ಯ ಭಾಷೆಗಳಲ್ಲಿ ಒಂದೆರಡು ಕಲಿಯುವದಂತೂ ಇದ್ದೇ ಇದೆ.

೫ ಶಿಕ್ಷಣದ ದೃಷ್ಟಿಯಿಂದ ಇಷ್ಟು ಭಾಷೆಗಳ ನಂತರ ಇಂಗ್ಲೀಷ ಭಾಷೆಗೆ ಸ್ಥಾನವುಂಟು. ಆದರೆ ವ್ಯಾವಹಾರಿಕ ದೃಷ್ಟಿಯಿಂದ ಇದರ ಬೆಲೆಯು ಹೆಚ್ಚಾಗಿದೆ. ಆದರೂ ಸ್ವಭಾಷೆ, ರಾಷ್ಟ್ರಭಾಷೆ ಮತ್ತು ಮೂಲಭಾಷೆಯ ಬಳಿಕ ಇಂಗ್ರೇಜೀ ಭಾಷೆಗೆ ಸ್ಥಾನವಿರುವದು.

## ೧೨ ರಾಷ್ಟ್ರಭಾಷೆ

೧ ಹಿಂದೀ ಮತ್ತು ಉರ್ದು ಮಿಶ್ರಿತ ಭಾಷೆಯೆ ಹಿಂದುಸ್ತಾನಿ ಎನಿಸುವದು. ಸಾಮಾನ್ಯವಾಗಿ ದಿಲ್ಲಿ, ಲಖನೌ, ಪ್ರಯಾಗದಂಥ ಪಟ್ಟಣಗಳಲ್ಲಿ ಸಾಮಾನ್ಯ ಜನರಾಡುವ ಭಾಷೆಯೆ ಹಿಂದುಸ್ತಾನಿಯು. ಇದೇ ಹಿಂದುಸ್ತಾನದ ರಾಷ್ಟ್ರಭಾಷೆಯು. ದಕ್ಷಿಣ ಹಿಂದುಸ್ತಾನದ ಜನರ ಹೊರತು ಇಡೀ ದೇಶದ ಜನರಲ್ಲಿ ಇದರ ಬಳಿಕೆಯು ನೂರಾರು ವರ್ಷಗಳಿಂದ ನಡೆದುಬಂದಿದೆ.

೨ ಶಿಕ್ಷಿತ ಮನುಷ್ಯನಿಗೆ ಈ ಭಾಷೆಯು ಶುದ್ಧವಾಗಿ ಮಾತನಾಡಲಿಕ್ಕೂ ಬರೆಯಲಿಕ್ಕೂ ಓದಲಿಕ್ಕೂ ಬರತಕ್ಕದ್ದು.

೩ ಈ ಭಾಷೆಯು ನಾಗರೀ ಮತ್ತು ಉರ್ದು ಲಿಪಿಯಲ್ಲಿ ಬರೆಯಲ್ಪಡುತ್ತದೆ. ಆದ್ದರಿಂದ ಎರಡೂ ಲಿಪಿಗಳ ಜ್ಞಾನವು ಪ್ರತಿಯೊಬ್ಬನಿಗೂ ಇರುವದೊಳ್ಳೆಯದು.

೪ ಪ್ರಾಂತೀಯ ಭಾಷೆಯನ್ನು ಗೌಣಮಾಡುವದಕ್ಕಾಗಿ ರಾಷ್ಟ್ರ

ಭಾಷೆಯು ಇರುವದಿಲ್ಲ. ಇಡೀ ದೇಶದ ವ್ಯವಹಾರಕ್ಕಾಗಿ ಇದು ಬೇಕು. ಇದಕ್ಕೆ ರಾಷ್ಟ್ರಭಾಷೆಯ ಸ್ಥಾನವು ಹೊಸದಾಗಿ ಕೊಡಲ್ಪಟ್ಟಿಲ್ಲ. ವ್ಯವಹಾರದಲ್ಲಿ ಇದ್ದುದನ್ನೆ ಇಲ್ಲಿ ನಾವು ಒಪ್ಪಿದ್ದೇವೆ.

## ೧೩ ಇತಿಹಾಸ

೧ ಇವತ್ತು ಇತಿಹಾಸವು ತಪ್ಪು ಉದ್ದೇಶದಿಂದಲೂ ತಪ್ಪು ದೃಷ್ಟಿಬಿಂದುಗಳಿಂದಲೂ ಕಲಿಸಲ್ಪಡುತ್ತಿದೆ, ಆದ್ದರಿಂದ ನಮಗೆ ಇವತ್ತು ಕಲಿಸಲ್ಪಡುತ್ತಿರುವ ಇತಿಹಾಸದ ಸಂಗತಿಗಳು ನಿಜವಿದ್ದರೂ ಅವು ನಮಗೆ ನಮ್ಮ ಪೂರ್ವಜರ ಭೂತಕಾಲದ ಸ್ಥಿತಿಯ ತಪ್ಪು ಕಲ್ಪನೆಯನ್ನು ಮಾಡಿಕೊಡುತ್ತವೆ.

೨ ಅರಸುಮನೆತನಗಳ ಏರಿಳಿತ ಮತ್ತು ಯುದ್ಧದ ವರ್ಣನೆಯು ಜನಾಂಗದ ಇತಿಹಾಸವೆನಿಸುವದಿಲ್ಲ; ಹಿಂದುಸ್ತಾನದಂಥ ಜನಾಂಗದ ಇತಿಹಾಸವಂತೂ ಅದಲ್ಲ. ಅದು ಆಗಾಗ್ಗೆ ಜನಾಂಗದ ಶರೀರದ ಮೇಲೆ ಎದ್ದ ಗುಳ್ಳೆಗಳ ಇತಿಹಾಸವೆನಿಸುವುದು. ಜನಾಂಗದ ಜೀವನದಲ್ಲಿ ಯುದ್ಧಗಳು ದಿನಾಲು ಜರಗುವದಿಲ್ಲ. ಆದರೆ ಆಗಾಗ್ಗೆ ಬೀಳುವ ಉಲ್ಕಾಪಾತಗಳಂತೆ ಜರಗುವವು ಅರ್ಥಾತ್ ಯುದ್ಧಗಳು ಜನಾಂಗದ ನಿತ್ಯಜೀವನವಲ್ಲ. ಜನಾಂಗದ ನಿತ್ಯಜೀವನದಲ್ಲಿ ಅರಿವು, ಬಂಧುತ್ವ, ಪರಸ್ಪರ ಕಷ್ಟಸಹನ ಪ್ರಿಯತೆ ಮತ್ತು ಸಹಕಾರವು ಇರುತ್ತದೆ. ಇವುಗಳಿಂದಾದ ಪ್ರಗತಿಯನ್ನು ಇತಿಹಾಸವು ಬಹು ಗೌಣರೀತಿಯಿಂದ ವರ್ಣಿಸುತ್ತದೆ. ಆದ್ದರಿಂದ ಸದ್ಯಕ್ಕೆ ಇತಿಹಾಸವು ಭೂತಕಾಲದ ಭ್ರಮಾತ್ಮಕ ಚಿತ್ರವನ್ನು ನಮ್ಮೆದುರು ಸಾದರಪಡಿಸುತ್ತದೆ.

೩ ಈ ರೀತಿ ನಾವು ಇತಿಹಾಸವನ್ನು ಪರಿಶೀಲಿಸಿ ನೋಡಿದರೆ ನಮಗೆ ಜನಾಂಗದ ನಿತ್ಯವ್ಯವಹಾರದಲ್ಲಿ ಹಿಂಸಾಮಯ ಕಲಹಗಳಿಗಿಂಲೂ ಅಹಿಂಸಾಮಯ ಸತ್ಯಾಗ್ರಹದ ಪ್ರಯೋಗಗಳೆ ಹೆಚ್ಚಾಗಿ ಮಾಡಲ್ಪಟ್ಟಿರುವವೆಂದು ಕಂಡುಬರುವದು.

೪ ಇತಿಹಾಸದ ಶಿಕ್ಷಣದಲ್ಲಿ ಇದೊಂದೆ ದೋಷವಿಲ್ಲ. ಸದ್ಯಕ್ಕಂತೂ ಇತಿಹಾಸದ ಶಿಕ್ಷಣವು ತಿಳಿದು ತಿಳಿದು ತಪ್ಪು ಕಲ್ಪನೆಗಳುಂಟಾಗಬೇಕೆಂಬ ಉದ್ದೇಶದಿಂದ ಕೊಡಲ್ಪಡುತ್ತಿದೆ ಮತ್ತು ಇಂಗ್ಲೀಷರು ಬರುವ ಪೂರ್ವಕಾಲದ

ಚಿತ್ರವು ಅತ್ಯಂತ ಕೆಡಕು ರೀತಿಯಲ್ಲಿ ಚಿತ್ರಿಸಲ್ಪಟ್ಟಿರುವದು, ವರ್ಣಿಸಲ್ಪಟ್ಟಿರುವದು. ಇಂಗ್ರೇಜೀ ರಾಜ್ಯದ ಬಗ್ಗೆ ಮೋಹವುಂಟಾಗುವಂತೆ ಚಿಕ್ಕಂದಿನಿಂದಲೆ ಇತಿಹಾಸದ ಶಿಕ್ಷಣವು ಕೊಡಲ್ಪಡುತ್ತಿರುವದು. ಅದರಲ್ಲಿ ಅಸತ್ಯವಷ್ಟೆ ಅಲ್ಲ, ಅಪ್ರಾಮಾಣಿಕತೆಯೂ ಇರುವದು.

## ೧೪ ಶಿಕ್ಷಣದ ಅನ್ಯ ವಿಷಯುಗಳು

೧ ಹಿಂದುಸ್ತಾನದಲ್ಲಿ ಸಂಗೀತಶಿಕ್ಷಣದ ಕಡೆಗೆ ಬಹಳ ಕಡಿಮೆ ಗಮನವು ಕೊಡಲ್ಪಟ್ಟಿದೆ. ಚಿತ್ತದ ಭಾವನೆಗಳನ್ನು ಎಚ್ಚರಿಸಲು ಸಂಗೀತವು ಒಂದು ಉತ್ತಮ ಸಾಧನವು. ಈ ದೃಷ್ಟಿಯಿಂದ ಸಾತ್ವಿಕ ಸಂಗೀತವು ಆಧ್ಯಾತ್ಮಿಕ ವಿಕಾಸಕ್ಕೆ ಅತ್ಯಂತ ಅಗತ್ಯವಾದ ಸಾಧನವೆನಿಸುವದು. ಬಾಲಕನಲ್ಲಿದ್ದ ಈ ಪ್ರಾಕೃತಿಕ ಶಕ್ತಿಯನ್ನು ಸಾತ್ವಿಕ ಉಪಾಯಗಳಿಂದ ಅರಳಿಸಬೇಕು.

೨ ಕರ್ಮೇಂದ್ರಿಯಗಳ ಮತ್ತು ಸಾರ್ವಜನಿಕ ಕಾರ್ಯಗಳಿಗೆ ಶಿಸ್ತಿನ ಶಿಕ್ಷಣ ಬೇಕು, ಕವಾಯಿತಿನ ಜ್ಞಾನವು ಬೇಕು. ಇದು ಇಲ್ಲದ ಮೂಲಕ ಎಷ್ಟೋ ಅವ್ಯವಸ್ಥೆಯು, ಶಕ್ತಿಯ ಅಪವ್ಯಯುವು, ಗೊಂದಲ ಹಾಗೂ ಜೀವ, ಜಂಗಮಾಸ್ತಿಯ ಹಾನಿಯು ಉಂಟಾಗುವದು. ಶಿಸ್ತಿನಿಂದ ಏಳುವ, ನಡೆಯುವ ಮತ್ತು ಕೆಲಸ ಮಾಡುವ, ೮-೧೦ ಜನರು ಒಟ್ಟು ಸೇರುತ್ತಲೆ ಕವಾಯಿತಿನಂತೆ ಶಿಸ್ತಿನಿಂದ ಕೆಲಸ ಮಾಡುವ ಅಭ್ಯಾಸವು ನಮಗೆ ಬೀಳತಕ್ಕದ್ದು. ಆದ್ದರಿಂದ ಪಾಠಶಾಲೆಗಳಲ್ಲಿ ಕವಾಯಿತು (ಡ್ರಿಲ್ಲು) ಶಿಕ್ಷಣವು ಕೊಡಲ್ಪಡಬೇಕು ಮತ್ತು ವಯಸ್ಸಾದವರೂ ಇದರ ಶಿಕ್ಷಣವನ್ನು ಪಡೆಯಬೇಕು.

೩ ಹಿಂದುಸ್ತಾನದಲ್ಲಿ ಬಲಾತ್ಕಾರದಿಂದ ಶಸ್ತ್ರಾಸ್ತ್ರಗಳು ಕಸಿದುಕೊಳ್ಳಲ್ಪಟ್ಟಿವೆ, ಭಾರತೀಯರು ತಮ್ಮ ಇಚ್ಛೆಯಿಂದ ಶಸ್ತ್ರಗಳನ್ನು ತ್ಯಜಿಸಿಲ್ಲ. ಶಸ್ತ್ರಾಸ್ತ್ರಗಳನ್ನು ಧರಿಸುವ ಮತ್ತು ಸೈನಿಕಶಿಕ್ಷಣವನ್ನು ಪಡೆಯುವ ಅಧಿಕಾರವು ಪ್ರತಿಯೊಬ್ಬರಿಗೂ ಉಂಟು. ಆದ್ದರಿಂದ ಇಷ್ಟಪಟ್ಟವರಿಗೆ ಸೈನಿಕ ಶಿಕ್ಷಣವೂ ಶಿಕ್ಷಣದ ಅನಿವಾರ್ಯ ವಿಷಯವು.

## ೧೫ ಶಿಕ್ಷಕ

೧ ಶಿಕ್ಷಕನು ತಾನು ಕಲಿಸುವ ವಿಷಯದಲ್ಲಿ ಪ್ರವೀಣನಿರಬೇಕು. ಅವನ ನಡತೆ ಹೇಗಿದ್ದರೂ ಸರಿ ಎಂದು ತಿಳಿಯುವದು ತೀರ ತಪ್ಪಾದುದು ಮತ್ತು ದೋಷಯುಕ್ತವಾದದ್ದು.

೨ ನಡತೆಯು ಚನ್ನಾಗಿಲ್ಲದ ಆದರೆ ಪ್ರವೀಣನಿದ್ದ ಶಿಕ್ಷಕನಿಂದ ಶಿಕ್ಷಣವನ್ನು ಹೊಂದಿ ಒಂದೆರಡು ವಿಷಯಗಳಲ್ಲಿ ವಿದ್ಯಾರ್ಥಿಯು ನೈಪುಣ್ಯವನ್ನು ಸಂಪಾದಿಸುವದಕ್ಕಿಂತ ಕಡಿಮೆ ಪ್ರವೀಣನಿದ್ದು ಚನ್ನಾದ ನಡತೆಯುಳ್ಳ ಶಿಕ್ಷಕನಿಂದ ಶಿಕ್ಷಣವನ್ನು ಪಡೆಯುವದು ಸಾವಿರಾರು ಪಾಲು ಶ್ರೇಷ್ಠವಾದದ್ದು.

೩ ತನ್ನ ವಿಷಯವನ್ನು ಚನ್ನಾಗಿ ಕಲಿಸಲು ಮಾತ್ರ ತಾನು ಹೊಣೆಗಾರನೆಂದು ತಿಳಿದುಕೊಂಡು ವಿದ್ಯಾರ್ಥಿಯ ನಡತೆಯನ್ನು ಸುಧಾರಿಸುವ ಹೊಣೆಯನ್ನು ಹೊರಲು ಒಪ್ಪದಿರುವ ಶಿಕ್ಷಕನು ಶಿಕ್ಷಕನೆಂದೆನಿಸುವದೆ ಇಲ್ಲ.

೪ ಆದರ್ಶ ಶಿಕ್ಷಕನು ವಿದ್ಯಾರ್ಥಿಯ ಅಭ್ಯಾಸದ ಕಡೆಗೆ ಅಷ್ಟೇ ಗಮನವನ್ನು ಕೊಡದೆ ಅವನ ಇಡೀ ಜೀವನದ ಉನ್ನತಿಯ ಕಡೆಗೆ ಸಂಪೂರ್ಣ ಲಕ್ಷ್ಯಕೊಟ್ಟು ಅವನ ಅಂತರಾಳದಲ್ಲಿ ಇಳಿಯಲು ಪ್ರಯತ್ನಿಸುವನು.

೫ ಇಂತಹ ಶಿಕ್ಷಕನು ವಿದ್ಯಾರ್ಥಿಗೆ ಭಯಂಕರ ಪುರುಷನಂತೆ ಮತ್ತು ಯಮನಂತೆ ಕಾಣುವದಿಲ್ಲ. ಆದರೆ ಪೂಜ್ಯನಾಗಿಯೂ ತಾಯಿಯಂತೆ ಸಮೀಪದ ಬಂಧುವಾಗಿಯೂ ತೋರುವನು.

೬ ಶಿಕ್ಷಕನು ತನ್ನ ಯೋಗ್ಯತೆಯನ್ನು ಬೆಳೆಸಿಕೊಳ್ಳಲು ಸದಾ ಪ್ರಯತ್ನ ಮಾಡತಕ್ಕದ್ದು. ತನ್ನ ವಿಷಯವನ್ನು ಕುರಿತು ಹೊಸ ಹೊಸ ಜ್ಞಾನವನ್ನು ಸಂಪಾದಿಸಿಕೊಂಡೇ ವಿಷಯವನ್ನು ಚನ್ನಾಗಿ ತಯಾರಿಸಿಕೊಂಡೇ ಅವನು ವರ್ಗದಲ್ಲಿ ಪ್ರವೇಶಿಸಬೇಕು.

೭ ಶಿಕ್ಷಕನು ವಿದ್ಯಾರ್ಥಿಗಿಂತಲೂ ಹೆಚ್ಚು ಉತ್ತಮ ತರಗತಿಯ ವಿದ್ಯಾರ್ಥಿ ಜೀವನವನ್ನು ಕಳೆಯಬೇಕು ಮತ್ತು ಅಧ್ಯಯನದಲ್ಲಿ ತೊಡಗಿರಬೇಕೆಂಬುದೆ ಮೇಲಿನ ಮಾತಿನ ತಾತ್ಪರ್ಯ.

೮ ಪೂರ್ಣ ಸಿದ್ಧತೆ ಮಾಡಿಕೊಳ್ಳದೆ ವರ್ಗವನ್ನು ತೆಗೆದುಕೊಳ್ಳುವ ಶಿಕ್ಷಕನು ವಿದ್ಯಾರ್ಥಿಗಳ ಅಮೂಲ್ಯ ಸಮಯವನ್ನು ನಷ್ಟಪಡಿಸುವನು.

೯ ಶಿಕ್ಷಕನು ಶ್ರೇಷ್ಠತರ ಶಿಕ್ಷಣಪದ್ಧತಿಯನ್ನು ಶೋಧಿಸುತ್ತಲೆ ಇರಬೇಕು. ಪ್ರತಿಯೊಬ್ಬ ವಿದ್ಯಾರ್ಥಿಯ ವೈಶಿಷ್ಟ್ಯವನ್ನು ಪರೀಕ್ಷಿಸಿ ಯಾವ ವಿಷಯದಲ್ಲಿ ಅವನಿಗೆ ಹೆಚ್ಚು ರುಚಿ ಇದೆಯೆಂಬುದನ್ನು ಕಂಡುಹಿಡಿಯಬೇಕು ಮತ್ತು ಅವನಿಗೆ ಆಯಾ ವಿಷಯಗಳಲ್ಲಿ ಹೆಚ್ಚು ರುಚಿಯೂ ಪ್ರಗತಿಯೂ ಆಗುವಂತೆ ಪ್ರಯತ್ನಿಸಬೇಕು. ವಿದ್ಯಾರ್ಥಿಗಳಿಗೆ ಪ್ರಶ್ನೆ ಕೇಳಗೊಡಬೇಕು ಮತ್ತು ಅವರಿಗೆ ಸಮರ್ಪಕ ಉತ್ತರಗಳನ್ನಿತ್ತು ಅವರನ್ನು ಸಮಾಧಾನಪಡಿಸಬೇಕು.

೧೦ ಹೊಡೆಯಲು, ಬೈಯಲು, ತಿರಸ್ಕರಿಸಲು ಅಥವಾ ಯಾವದಾದರೂ ಶಿಕ್ಷೆಯನ್ನು ವಿಧಿಸಲು ಶಿಕ್ಷಕನಿಗೆ ಪ್ರತಿಬಂಧ ಇರಬೇಕು.

೧೧ ತನ್ನ ಕೆಲಸವನ್ನು ಚನ್ನಾಗಿ ಮಾಡಬೇಕೆನ್ನುವ ಶಿಕ್ಷಕನು ಬಹಳ ವಿದ್ಯಾರ್ಥಿಗಳ ದೊಡ್ಡ ವರ್ಗದ ಕಡೆಗೆ ಹೆಚ್ಚು ಲಕ್ಷ್ಯವನ್ನು ಕೊಡಲಾರನೆಂದು ತಿಳಿದುಬಂದಿದೆ.

೧೨ ನೂರಾರು ವಿದ್ಯಾರ್ಥಿಗಳುಳ್ಳ ವಿದ್ಯಾಲಯಗಳೂ ಇಷ್ಟವಲ್ಲ.

## ೧೬ ವಿದ್ಯಾರ್ಥಿ

೧ ವಿದ್ಯೆಯು ವಿನಯದಿಂದ ಶೋಭಿಸುವದು. ಇಷ್ಟೇ ಅಲ್ಲ, ವಿನಯ ವಿಲ್ಲದಿದ್ದರೆ ವಿದ್ಯೆಯು ದೊರೆಯುವದೂ ಇಲ್ಲ.

೨ ವಿದ್ಯಾರ್ಥಿಯು ಶಿಕ್ಷಕನೊಡನೆ ಗುರುಭಾವನೆಯಿಂದ ವರ್ತಿಸಬೇಕು, ಗುರುವಿನಲ್ಲಿ ಶ್ರದ್ಧೆಯನ್ನು ಇಡಬೇಕು ಮತ್ತು ಅವನೊಡನೆ ವಿನಯದಿಂದಲೂ ಸೇವಾಭಾವನೆಯಿಂದಲೂ ನಡೆದುಕೊಳ್ಳಬೇಕು.

೩ ಶಿಕ್ಷಕನು ಇಂಥ ಶ್ರದ್ಧೆಗೆ ಯೋಗ್ಯನಿಲ್ಲವೆಂದು ಮನದಟ್ಟಾದರೆ ವಿದ್ಯಾರ್ಥಿಯು ವಿನಯವನ್ನು ತ್ಯಜಿಸದೆ ಶಿಕ್ಷಕನನ್ನು ತ್ಯಜಿಸಬೇಕು.

೪ ವಿದ್ಯಾರ್ಥಿಗಳು ಕೇಳಿ ಕೇಳಿ ಶಿಕ್ಷಕರಿಂದ ತಮ್ಮ ಸಂಶಯಗಳನ್ನು ದೂರ ಮಾಡಿಕೊಳ್ಳಬೇಕು.

೫ ವಿದ್ಯಾರ್ಥಿಯು ಶಿಕ್ಷಕನಿಂದ ಸರ್ವಜ್ಞಾನವನ್ನು ಹೀರಿಕೊಳ್ಳಲು ಆತುರ ಪಡುತ್ತಿರುವನೆಂದು ತೋರಿಸಕೂಡದು. ವಿನಯದಿಂದ ವರ್ತಿಸಿ ಶಿಕ್ಷಕನ ಮನಸ್ಸನ್ನು ಪ್ರಸನ್ನಗೊಳಿಸಲು ಯತ್ನಿಸುವ ವಿದ್ಯಾರ್ಥಿಗೆ ಶಿಕ್ಷಕನು ತನ್ನ ಜ್ಞಾನಭಾಂಡಾರವನ್ನು ಅರ್ಪಿಸಲು ತಾನಾಗಿ ಸಿದ್ಧನಾಗುವನು, ಆತುರನಾಗುವನು. ಈ ಆತುರತೆಯು ಶಿಕ್ಷಕನಲ್ಲಿ ಉಂಟಾಗದಿರುವತನಕ ವಿದ್ಯಾರ್ಥಿಯು ತಾಳ್ಮೆಯಿಂದ ಇರಬೇಕು.

೬ ಆದರೆ ಶಿಕ್ಷಕನು ತನ್ನ ಜ್ಞಾನದ ಮಳೆಯನ್ನು ಸುರಿಸಲು ಆರಂಭಿಸಿದಾಗ ವಿದ್ಯಾರ್ಥಿಯು ಸೋಮಾರಿತನದಿಂದ ಆ ಸುಪ್ರಸಂಗವನ್ನು ಕಳೆದುಕೊಳ್ಳ ತಕ್ಕದ್ದಲ್ಲ.

## ೧೭ ವಿದ್ಯಾರ್ಥಿನಿಲಯ

೧ ವಿದ್ಯಾರ್ಥಿಗಳಿಗೆ ಕೇವಲ ವಾಸಿಸುವದಕ್ಕಾಗಿಯೂ ಭೋಜನ

ಕ್ಕಾಗಿಯೂ ಅನುಕೂಲತೆಯನ್ನು ಮಾಡಿಕೊಡುವಂಥ ಭೋಜನಾಲಯವು ವಿದ್ಯಾರ್ಥಿನಿಲಯವೆನಿಸುವದಿಲ್ಲ.

೨ ಪಾಠಶಾಲೆಗಿಂತಲೂ ವಿದ್ಯಾರ್ಥಿನಿಲಯದ ಮಹತ್ವ ವಿಶೇಷವಾಗಿದೆ. ವಿದ್ಯಾರ್ಥಿನಿಲಯವು ತಂದೆತಾಯಂದಿರ ಮನೆಯ ಬದಲಾಗಿ ಇರುವದು; ತವರುಮನೆಯಲ್ಲಿ ದೊರೆಯದ ಸಂಸ್ಕಾರಗಳು ಇಲ್ಲಿ ದೊರೆಯಬಲ್ಲವೆಂಬುದನ್ನು ಗೃಹಪತಿಯು ಸಿದ್ಧಮಾಡಬೇಕು.

೩ ಆದ್ದರಿಂದ ಪಾಠಶಾಲೆಯ ಆಚಾರ್ಯರ ಅಥವಾ ವರ್ಗದ ಅಧ್ಯಾಪಕರಿಗಿಂತಲೂ ವಿದ್ಯಾರ್ಥಿನಿಲಯದ ಅಧಿಪತಿಯು ಹೆಚ್ಚು ಯೋಗ್ಯನಾದ ಮನುಷ್ಯನಿರಬೇಕು. ಇವನಲ್ಲಿ ಶಿಕ್ಷಕನ ಗುಣಗಳೂ ಇರಬೇಕು. ತಂದೆತಾಯಂದಿರ ಗುಣಗಳೂ ಇರಬೇಕು.

೪ ವಿದ್ಯಾರ್ಥಿಗಳ ಪ್ರತಿಯೊಂದು ಕಾರ್ಯ ಮತ್ತು ಸಂಗತಿ ಇವೆರಡರ ಮೇಲೆ ಇವನ ದೃಷ್ಟಿ ಇರತಕ್ಕದ್ದು.

೫ ಹುಡುಗರು ಒಟ್ಟಾರೆ ಸೇರಿ ಇರುವ ಸ್ಥಾನದಲ್ಲಿ ಅವರ ಗುಪ್ತವಾದ ಮತ್ತು ಬಹಿರಂಗದಲ್ಲಿ ಕಾಣುವ ದೋಷಗಳು ದೃಷ್ಟಿಗೋಚರವಾಗುವವು. ಇತ್ತ ಗೃಹಪತಿಯು ಬಹು ಚಾತುರ್ಯದಿಂದ ಗಮನಗೊಟ್ಟಿರಬೇಕು.

೬ ವಿದ್ಯಾರ್ಥಿನಿಲಯದಲ್ಲಿ ಪಂಕ್ತಿಭೇದವು ಇರಕೂಡದು.

೭ ವಿದ್ಯಾರ್ಥಿನಿಲಯದಲ್ಲಿ ಸಾಧ್ಯವಾದ ಮಟ್ಟಿಗೆ ಆಳುಗಳನ್ನು ಇಡಕೂಡದು. ವಿದ್ಯಾರ್ಥಿಗಳು ತಮ್ಮ ತಮ್ಮ ಕಾರ್ಯಗಳನ್ನು ತಾವೇ ಮಾಡಿಕೊಳ್ಳಬೇಕು.

೮ ಬಡದೇಶಕ್ಕೆ ತಕ್ಕಂತೆ ವಿದ್ಯಾರ್ಥಿನಿಲಯದ ವೆಚ್ಚವಿರಬೇಕು.

೯ ವಿದ್ಯಾರ್ಥಿಗಳಿಗೆ ನಿಯಮಿತವಾಗಿ ಮಿಷ್ಟಾನ್ನವು ದೊರೆಯಲೆಬೇಕೆಂಬ ರೂಢಿ ಒಳಿತಾದುದಲ್ಲ.

೧೦ ವಿದ್ಯಾರ್ಥಿನಿಲಯವು ಸರಳತನ, ಮಿತವ್ಯಯ ಮತ್ತು ಸುಸಭ್ಯ ನಡತೆಯ ಸಂಸ್ಕಾರಗಳ ಗುರಿಯನ್ನು ವಿದ್ಯಾರ್ಥಿಗಳ ಎದುರಿನಲ್ಲಿಡುವಂಥಾದ್ದಿರಬೇಕು. ವಿದ್ಯಾರ್ಥಿನಿಲಯದಲ್ಲಿ ಸೇರಿ ವಿದ್ಯಾರ್ಥಿಯು ವಿನಯಹೀನನೂ ವೆಚ್ಚಬಡಕನೂ ಉಚ್ಛೃಂಖಲನೂ ಆದರೆ ಆ ವಿದ್ಯಾರ್ಥಿನಿಲಯಕ್ಕೆ ಸಫಲತೆ ದೊರೆಯುವದಿಲ್ಲವೆಂದು ಹೇಳಬೇಕಾಗುವದು.

## ೧೮ ಶಿಕ್ಷಣದ ವೆಚ್ಚ

೧ ಶಿಕ್ಷಣಕ್ಕಾಗಿ ಇಂದು ಬಹಳ ವೆಚ್ಚಮಾಡಬೇಕಾಗುತ್ತದೆ. ಆದ್ದರಿಂದ ಶಿಕ್ಷಣವು ಇವತ್ತು ವೆಚ್ಚದ ಶಿಕ್ಷಣವಾಗಿದೆ. ಈ ಸ್ಥಿತಿಯು ಶಿಕ್ಷಣಕ್ರಮವು ಸರಿಯಾಗಿಲ್ಲವೆಂಬದನ್ನು ತೋರಿಸುತ್ತದೆ.

೨ ಶಿಕ್ಷಕರು ಮತ್ತು ವಿದ್ಯಾರ್ಥಿಗಳು ತಮ್ಮ ಆಹಾರ ಮತ್ತು ವಸ್ತ್ರಕ್ಕೋಸ್ಕರ ಎಷ್ಟು ವೆಚ್ಚವು ತಗಲುವದೊ ಅಷ್ಟನ್ನು ಅವರು ಸ್ವತಃ ದುಡಿದು ಸಂಪಾದಿಸಲು ಸಮರ್ಥರಾಗಬೇಕು. ಈ ದೃಷ್ಟಿಯಿಂದ ಶಿಕ್ಷಣದ ಯೋಜನೆ ಮಾಡಬೇಕು. ಮನೆ ಮತ್ತು ಸಾಧನಗಳ ಸಲುವಾಗಿ ತಗಲುವ ವೆಚ್ಚವನ್ನು ಪ್ರಜರಿಂದ ಬೇಡಿ ಪಡೆಯಬೇಕು.

೩ ಇವತ್ತು ಹೀಗಾಗುವದು ಸಾಧ್ಯವಿಲ್ಲ. ಏಕೆಂದರೆ ವಿದ್ಯಾರ್ಥಿಗಳಿಗೂ ಶಿಕ್ಷಕರಿಗೂ ಪರಿಶ್ರಮಪಡುವ ಅಭ್ಯಾಸವಿಲ್ಲ ಮತ್ತು ದುಡಿಯಲು ಕಲಿಸಿರುವದಿಲ್ಲ. ಈ ದಿಶೆಯಲ್ಲಿ ಪ್ರಯತ್ನವಾಗಬೇಕೆನ್ನುವದರಲ್ಲಿ ಏನೂ ಸಂದೇಹವಿಲ್ಲ.

೪ ಬಾಲಕನಿಗೆ ಮನೆಯಲ್ಲಿ ಯಾವ ತರದ ಶಿಕ್ಷಣವು ದೊರೆಯುವದು ಸಾಧ್ಯವಿದೆಯೊ ಅಂಥ ಶಿಕ್ಷಣವನ್ನು ಕೊಡುವದಕ್ಕಾಗಿ ಪಾಠಶಾಲೆಗಳು ಬೇಕಾಗುವದಿಲ್ಲ. ಆದುದರಿಂದ ತಂದೆತಾಯಂದಿರುಗಳು ಸುಸಂಸ್ಕೃತರಾಗುವಂತೆ ಶಿಕ್ಷಣ ಕೊಟ್ಟರೆ ಶಿಕ್ಷಣದ ವೆಚ್ಚವು ಕಡಿಮೆಯಾಗುವದು.

೫ ಪ್ರಾಥಮಿಕ ಶಿಕ್ಷಣವು ಹೆಚ್ಚಾಗಿ ಮನೆಯಲ್ಲಿಯೆ ದೊರೆಯಬೇಕು.

## ೧೯ ಉಪಸಂಹಾರ

( ಪೂಜ್ಯ ಗಾಂಧೀಜಿಯವರು ' ಸತ್ಯಾಗ್ರಹಾಶ್ರಮದ ಇತಿಹಾಸ ' ವನ್ನು ಬರೆಯಲಾರಂಭಿಸಿದ್ದಾರೆ. ಅದರಲ್ಲಿ ಶಿಕ್ಷಣದ ವಿಷಯವಾಗಿದ್ದ ಪ್ರಕರಣದಲ್ಲಿ ಅವರು ಈ ರೀತಿಯಾಗಿ ತಮ್ಮ ಅಭಿಪ್ರಾಯಗಳ ಉಪಸಂಹಾರ ಮಾಡಿದ್ದಾರೆ. ಅದನ್ನೆ ಈ ಖಂಡಕ್ಕೆ ಜೋಡಿಸುತ್ತೇನೆ. ಅವರ ಆ ಹಸ್ತಲಿಖಿತ ಭಾಷೆಯಲ್ಲಿಯೂ ಕೆಳಗೆ ಕೊಟ್ಟ ಭಾಷೆಯಲ್ಲಿಯೂ ಅಲ್ಲಲ್ಲಿ ಸ್ವಲ್ಪ ಅಂತರವಿದೆ, ಗಾಂಧೀಜಿಯವರೆ ಪುಸ್ತಕವನ್ನು ತಿದ್ದುವಾಗ ಆ ಅಂತರವು ಆಗಿದೆ. ಈ ಪ್ರಕರಣದಲ್ಲಿಯ ವಿಚಾರಗಳು ಹಿಂದಿನ ಪ್ರಕರಣಗಳಲ್ಲಿ ಒಂದಿಲ್ಲೊಂದು ರೂಪದಲ್ಲಿ ಬಂದೇಬಿಟ್ಟವೆ.

—ಕಿ. ಘ. ಮ.)

ಶಿಕ್ಷಣದ ವಿಷಯದಲ್ಲಿ ನನ್ನ ಅಭಿಪ್ರಾಯವು ಕೆಳಗಿನಂತಿದೆ :

**ಪ್ರಥಮಕಾಲ**

೧ ಬಾಲಕ ಬಾಲಿಕೆಯರಿಗೆ ಜೊತೆಯಲ್ಲಿಯೆ ಶಿಕ್ಷಣ ಕೊಡತಕ್ಕದ್ದು.

೨ ಶಿಷ್ಯರು ತಮ್ಮ ವೇಳೆಯನ್ನು ಶಾರೀರಕ ಕಾರ್ಯಗಳಲ್ಲಿಯೆ ವಿಶೇಷ ವಾಗಿ ವೆಚ್ಚಮಾಡುತ್ತಿರಬೇಕು. ಅವರು ಮಾಡುವ ಕಾರ್ಯಗಳು ಕೂಡ ಶಿಕ್ಷಣ ಕೊಡುವವನ ಎದುರಿನಲ್ಲಿಯೆ ಆಗುತ್ತಿರಬೇಕು. ಶಾರೀರಕ ಕಾರ್ಯಗಳು ಶಿಕ್ಷಣದ ವಿಭಾಗವೆನಿಸಬೇಕು.

೩ ಪ್ರತಿಯೊಬ್ಬ ಬಾಲಕ ಬಾಲಿಕೆಯ ಒಲವನ್ನು ಪರೀಕ್ಷಿಸಿ ಕೆಲಸವನ್ನು ಒಪ್ಪಿಸಬೇಕು.

೪ ಪ್ರತಿಯೊಂದು ಕೆಲಸವನ್ನು ತೆಗೆದುಕೊಳ್ಳುವಾಗ ಪ್ರತಿಯೊಂದು ಕಾರ್ಯದ ಮಾಹಿತಿ ಕೊಡಬೇಕು.

೫ ಬಾಲಕನಿಗೆ ತಿಳಿವಳಿಕೆ ಬಂದ ಮೇಲೆ ಸಾಮಾನ್ಯ ಜ್ಞಾನವನ್ನು ಮಾಡಿಕೊಡಬೇಕು. ಈ ಜ್ಞಾನದಾನವು ಅಕ್ಷರಜ್ಞಾನದ ಮೊದಲೇ ಪ್ರಾರಂಭ ವಾಗತಕ್ಕದ್ದು.

೬ ಅಕ್ಷರಜ್ಞಾನವು ಲೇಖನ ( ಚಿತ್ರ ) ಕಲೆಯ ವಿಭಾಗವೆಂದೆಣಿಸಿ ಮೊದಲು ಬಾಲಕನಿಗೆ ಭೂಮಿತಿಯ ಆಕೃತಿಗಳನ್ನು ತೆಗೆಯಲು ಕಲಿಸಿ, ಬೆರಳುಗಳಿಗೆ ಚನ್ನಾಗಿ ಅಭ್ಯಾಸವಾದ ಮೇಲೆ ಅಕ್ಷರಗಳನ್ನು ಕಲಿಸಬೇಕು. ಅರ್ಥಾತ್ ಮೊದಲಿನಿಂದಲೆ ಶುದ್ಧ ಅಕ್ಷರಗಳನ್ನು ಬರೆಯಲು ಕಲಿಸಬೇಕು.

೭ ಬರಹಕ್ಕಿಂತ ಮೊದಲು ಬಾಲಕನು ಓದಲು ಕಲಿಯಬೇಕು. ಅಕ್ಷರ ಗಳು ಚಿತ್ರಗಳೆಂದು ತಿಳಿದು ಅವನ್ನು ಗುರುತಿಸಲು ಕಲಿತನಂತರ ಬರೆಯಲು ಕಲಿಯಬೇಕು.

೮ ಈ ರೀತಿ ಯಾವ ಬಾಲಕನು ಶಿಕ್ಷಕನ ಮುಖದಿಂದ ಜ್ಞಾನವನ್ನು ಪಡೆಯುವನೊ ಅವನು ಎಂಟು ವರ್ಷದಲ್ಲಿ ತನ್ನ ಯೋಗ್ಯತೆಗೆ ತಕ್ಕಂತೆ ಹೆಚ್ಚು ಜ್ಞಾನವನ್ನು ಪಡೆದವನಿರಬೇಕು.

೯ ಬಾಲಕನಿಗೆ ಬಲಾತ್ಕಾರದಿಂದ ಏನೂ ಕಲಿಸಕೂಡದು.

೧೦ ತಾನು ಯಾವದನ್ನು ಕಲಿಯುವನೊ ಅದರಲ್ಲಿ ಬಾಲಕನಿಗೆ ರುಚಿ ಯುಂಟಾಗಬೇಕು.

೧೧ ಬಾಲಕನಿಗೆ ಶಿಕ್ಷಣವು ಆಟದಂತೆನಿಸಬೇಕು. ಆಟವು ಕೂಡ ಶಿಕ್ಷಣದ ಒಂದು ಅನಿವಾರ್ಯ ಅಂಗವೆ ಆಗಿದೆ.

೧೨ ಬಾಲಕನ ಎಲ್ಲ ಶಿಕ್ಷಣವು ಮಾತೃಭಾಷೆಯ ಮುಖಾಂತರವೆ ಆಗ ತಕ್ಕದ್ದು.

೧೩ ಬಾಲಕನಿಗೆ ಹಿಂದಿ, ಉರ್ದುಗಳನ್ನು ರಾಷ್ಟ್ರಭಾಷೆಯೆಂದು ಕಲಿಸಬೇಕು. ಅವು ಕೂಡ ಅಕ್ಷರಜ್ಞಾನಕ್ಕಿಂತ ಪೂರ್ವದಲ್ಲಿಯೆ ಪ್ರಾರಂಭಿಸಲ್ಪಡಬೇಕು.

೧೪ ಧಾರ್ಮಿಕ ಶಿಕ್ಷಣವು ಅನಿವಾರ್ಯವೆಂದು ತಿಳಿಯಬೇಕು. ಈ ಶಿಕ್ಷಣವನ್ನು ಬಾಲಕನು ಪುಸ್ತಕದಿಂದ ಪಡೆಯದೆ ಶಿಕ್ಷಕನ ವರ್ತನೆಯಿಂದ ಮತ್ತು ಅವನ ಮುಖದಿಂದ ಪಡೆಯಬೇಕು.

### ದ್ವಿತೀಯಕಾಲ

೧೫ ೯ರಿಂದ ೧೬ ವರ್ಷಗಳ ವರೆಗಿನ ಕಾಲವು ದ್ವಿತೀಯಕಾಲವೆನಿಸುವದು.

೧೬ ದ್ವಿತೀಯಕಾಲದ ಕೊನೆಯವರೆಗೂ ಬಾಲಕ-ಬಾಲಿಕೆಯರ ಶಿಕ್ಷಣವು ಜೊತೆಯಲ್ಲಿಯೆ ಸಾಗಿದರೆ ಒಳಿತು.

೧೭ ದ್ವಿತೀಯಕಾಲದಲ್ಲಿ ಹಿಂದೂ ಬಾಲಕನಿಗೆ ಸಂಸ್ಕೃತಜ್ಞಾನವಾಗಬೇಕು, ಮುಸಲ್ಮಾನ ಬಾಲಕನಿಗೆ ಅರಬಿಯ ಜ್ಞಾನವಾಗಬೇಕು.

೧೮ ಈ ಕಾಲದಲ್ಲಿಯೂ ಶಾರೀರಕ ಕೆಲಸವು ಹಾಗೆಯೆ ಮುಂದುವರಿಯಬೇಕು. ಬೇಕುಬೇಕಾದಂತೆ ಅಕ್ಷರಜ್ಞಾನಕ್ಕಾಗಿ ಸಮಯವನ್ನು ಬೆಳೆಸಿಕೊಳ್ಳಬೇಕು.

೧೯ ಬಾಲಕರ ತಂದೆ-ತಾಯಂದಿರು ಯಾವ ನಿಶ್ಚಿತ ಉದ್ಯೋಗವನ್ನು ಮಾಡಲು ತೊಡಗಿರುತ್ತಾರೊ ಆ ಉದ್ಯೋಗದ ಜ್ಞಾನವನ್ನೂ ಬಾಲಕನಿಗೆ ಈ ಕಾಲದಲ್ಲಿ ಮಾಡಿಕೊಡಬೇಕು. ತಮ್ಮ ಮಾತಾಪಿತೃಗಳು ಮಾಡುವ ಉದ್ಯೋಗವನ್ನೆ ಮಾಡಿ ಹೊಟ್ಟೆ ತುಂಬಿಕೊಳ್ಳಲು ಬಯಸುವಂತೆ ಅವನಿಗೆ ಆ ಉದ್ಯೋಗದ ಶಿಕ್ಷಣವನ್ನಿತ್ತು ತಯಾರ ಮಾಡಬೇಕು. ಈ ನಿಯಮವು ಬಾಲಿಕೆಯರಿಗೆ ಅನ್ವಯಿಸುವದಿಲ್ಲ.

೨೦ ಹದಿನಾರನೆ ವರ್ಷವು ಪ್ರಾರಂಭವಾಗುವದರೊಳಗಾಗಿ ಬಾಲಕಬಾಲಿಕೆಯರಿಗೆ ಜಗತ್ತಿನ ಇತಿಹಾಸ, ಭೂಗೋಲ, ವನಸ್ಪತಿಶಾಸ್ತ್ರ, ಆಕಾಶದರ್ಶನ, ಗಣಿತ, ಭೂಮಿತಿ ಮತ್ತು ಬೀಜಗಣಿತದ ಸಾಮಾನ್ಯ ಜ್ಞಾನವಾಗಿರಬೇಕು.

೨೧ ಹದಿನಾರು ವರ್ಷದ ಬಾಲಕ-ಬಾಲಿಕೆಯರಿಗೆ ಹೊಲಿಯಲು, ಅಡಿಗೆ ಮಾಡಲು ಬರುತ್ತಿರಬೇಕು.

**ತೃತೀಯಕಾಲ**

೨೨ ೧೬ ರಿಂದ ೨೫ ವರ್ಷಗಳ ವರೆಗಿನ ಕಾಲವು ತೃತೀಯಕಾಲವೆನಿಸುವದು. ಈ ಕಾಲದಲ್ಲಿ ಪ್ರತಿಯೊಬ್ಬ ಯುವಕ - ಯುವತಿಗೆ ಅವರವರ ಇಚ್ಛೆಯಂತೆ ಮತ್ತು ಅವರಿಗೆ ಅನುಕೂಲವಿದ್ದ ಪ್ರಕಾರ ಶಿಕ್ಷಣವು ದೊರೆಯಬೇಕು.

೨೩ ೯ ವರ್ಷ ಆದ ಮೇಲೆ ಪ್ರಾರಂಭಿಸಲ್ಪಡತಕ್ಕ ಶಿಕ್ಷಣವು ಸ್ವಾವಲಂಬಿ ಶಿಕ್ಷಣವಾಗಿರತಕ್ಕದ್ದು. ವಿದ್ಯಾರ್ಥಿಗಳು ಕಲಿಯುತ್ತಿರುವಾಗಲೆ ಕೆಲವೊಂದು ಉದ್ಯೋಗಗಳಲ್ಲಿ ತೊಡಗಿ ಅವುಗಳಿಂದ ದೊರೆತ ಉತ್ಪನ್ನದಿಂದ ತಮ್ಮ ಶಿಕ್ಷಣಕ್ಕೆ ತಗಲುವ ವೆಚ್ಚವನ್ನು ಸಾಗಿಸಿಕೊಂಡು ಹೋಗಬೇಕು.

೨೪ ಪಾಠಶಾಲೆಗಳಲ್ಲಿ ಉತ್ಪನ್ನವು ಮೊದಲಿನಿಂದಲೆ ಬರಲು ಪ್ರಾರಂಭಿಸಬೇಕು. ಆದರೆ ಮೊದಲನೆ ವರ್ಷದಲ್ಲಿ ವೆಚ್ಚಕ್ಕೆ ಸಾಕಾಗುವಷ್ಟು ಉತ್ಪನ್ನವಾಗಲಿಕ್ಕಿಲ್ಲ.

೨೫ ಶಿಕ್ಷಕವರ್ಗದವರ ಸಂಬಳವು ಹೆಚ್ಚಾಗಿರಕೂಡದು. ಅವರ ಹೊಟ್ಟೆ ಬಟ್ಟೆಗೆ ಸಾಕಾಗುವಷ್ಟು ದೊರೆಯಬೇಕು. ಅವರಲ್ಲಿ ಸೇವಾವೃತ್ತಿಯು ಇರಬೇಕು. ಮನಬಂದಂಥ ಶಿಕ್ಷಕನಿಂದ ಪ್ರಾಥಮಿಕ ಶಿಕ್ಷಣವನ್ನು ಪ್ರಾರಂಭಿಸುವ ಪರಿಪಾಠವು ನಿಂದನೀಯವಾಗಿದೆ. ಶಿಕ್ಷಕರೆಲ್ಲರೂ ಸುಚರಿತ್ರೆಯುಳ್ಳವರು ಆಗಿರಬೇಕು.

೨೬ ಶಿಕ್ಷಕರಿಗೋಸ್ಕರ ದೊಡ್ಡ ಮತ್ತು ಹೆಚ್ಚು ಬಾಡಿಗೆಯ ಮನೆಗಳ ಆವಶ್ಯಕತೆಯು ಇರುವದಿಲ್ಲ.

೨೭ ಇಂಗ್ರೇಜಿ ಭಾಷಾವಿಷಯವೆಂದು ಕಲಿಯಬೇಕು ಮತ್ತು ಶಿಕ್ಷಣಕ್ರಮದಲ್ಲಿ ಅದಕ್ಕೆ ಸ್ಥಾನವೂ ಇರತಕ್ಕದ್ದು. ಹಿಂದೀ ಹೇಗೆ ರಾಷ್ಟ್ರಭಾಷೆಯೊ ಹಾಗೆಯೆ ಇಂಗ್ರೇಜಿಯೂ ಪರರಾಷ್ಟ್ರಗಳೊಡನೆ ವ್ಯವಹಾರ ಮತ್ತು ವ್ಯಾಪಾರ ಮಾಡುವದಕ್ಕೂ ಬೇಕಾಗುವದು.

## ಸ್ತ್ರೀಶಿಕ್ಷಣ *

(೨೮) ಸ್ತ್ರೀಯರಿಗೆ ಒಂದು ವಿಶಿಷ್ಟ ತರದ ಶಿಕ್ಷಣವು ಯಾವದು ಮತ್ತು ಅದು ಎಲ್ಲಿಂದ ಪ್ರಾರಂಭಿಸಲ್ಪಡಬೇಕು, ಈ ವಿಷಯದಲ್ಲಿ ನಾನು ವಿಚಾರ

* ೨೮ - ೨೯ ನೇ ಸೂತ್ರಗಳನ್ನು ಗಾಂಧೀಜಿಯವರು ಉಪಸಂಹಾರದ ಕ್ರಮದಲ್ಲಿ ಬರೆದಿಲ್ಲ. ಆದರೆ ಇದೇ ಪ್ರಕರಣದಲ್ಲಿ ಸ್ವತಂತ್ರವಾಗಿ ಬರೆದಿದ್ದಾರೆ. ಆದ್ದರಿಂದಲೆ ಈ ಸೂತ್ರಗಳ ಅಂಕೆಗಳು ಕೌಂಸಿನಲ್ಲಿ ( ) ಬರೆಯಲ್ಪಟ್ಟಿವೆ.

ಮಾಡಿದೆನು ಮತ್ತು ಬರೆದೆನು. ಆದರೆ ಅವೆಲ್ಲ ವಿಚಾರಗಳು ಇನ್ನೂ ದೃಢ ವಾಗಿಲ್ಲ. ಆದರೂ ಪುರುಷರಿಗೆ ಶಿಕ್ಷಣಕ್ಕಾಗಿ ಎಷ್ಟು ಅನುಕೂಲತೆಗಳು ಇರುವವೊ ಅಷ್ಟೇ ಅನುಕೂಲತೆಗಳು ಸ್ತ್ರೀಯರಿಗೂ ದೊರೆಯಬೇಕೆಂದು ನನ್ನ ದೃಢ ಅಭಿಪ್ರಾಯವಿದೆ. ವಿಶೇಷ ಅನುಕೂಲತೆಗಳನ್ನು ಒದಗಿಸಿಕೊಡ ಬೇಕಾದಲ್ಲಿ ಅವುಗಳನ್ನು ಒದಗಿಸಿಕೊಡಬೇಕು.

### ಪ್ರೌಢ ಶಿಕ್ಷಣ

(೨೯) ವಯಸ್ಸಿಗೆ ಬಂದ ಕಲಿಯದೆ ಇದ್ದ ಸ್ತ್ರೀ-ಪುರುಷರಿಗೆ ವರ್ಗಗಳು ಬೇಕೇಬೇಕು. ಇವರೆಲ್ಲರಿಗೂ ಅಕ್ಷರಜ್ಞಾನವು ಇರಲೇಬೇಕೆಂದು ನನ್ನ ಅಭಿಪ್ರಾಯವಿರುವದಿಲ್ಲ. ಅವರಿಗೆ ವ್ಯಾಖ್ಯಾನ ಮುಂತಾದವುಗಳ ಮುಖಾಂತರ ಸಾಮಾನ್ಯಜ್ಞಾನವು ದೊರೆಯಬೇಕು, ಇದಕ್ಕಾಗಿ ಅನುಕೂಲತೆಗಳು ಇರಬೇಕು. ಅಕ್ಷರ ಜ್ಞಾನವನ್ನು ಪಡೆಯಬೇಕೆಂದು ಇಚ್ಛೆ ಇದ್ದವರಿಗೋಸ್ಕರ ಸಾಕಷ್ಟು ಅನುಕೂಲತೆಯಂತೂ ಇರಬೇಕು.

## ದ್ವಾದಶ ಖಂಡ

# ಸಾಹಿತ್ಯವೂ ಕಲೆಯೂ

### ೧ ಸಾಮಾನ್ಯ ಟೀಕೆ

೧ ಸಾಹಿತ್ಯ ಮತ್ತು ಕಲೆ ಇವೆರಡೂ ಸತ್ಯ, ಕಲ್ಯಾಣಕರ ಮತ್ತು ಉಪಯುಕ್ತತೆಯ ಒರೆಗಲ್ಲಿಗೆ ಹತ್ತಿ ಪಾರಾಗಲು ಬೇಕು.

೨ ಇಲ್ಲಿ ಸತ್ಯವು ವ್ಯಾಪಕಾರ್ಥದಲ್ಲಿ ಉಪಯೋಗಿಸಲ್ಪಟ್ಟಿದೆಯೆಂದು ತಿಳಿಯಬೇಕು. ಯಾವದೊಂದು ವಿವರಣೆಯು ಅಥವಾ ಸಂಗತಿಯು ಸತ್ಯ ವಿದ್ದರೆ ಮಾತ್ರ ಅದು ಸತ್ಯವೆಂದರ್ಥವಲ್ಲ. ಆದರೆ ಸಿದ್ಧಾಂತಗಳು ಅಥವಾ ಗುರಿಯು ಸತ್ಯವಿದ್ದರೆ ಅದು ಸತ್ಯವು ಎಂಬ ಅರ್ಥದಿಂದ ಇಲ್ಲಿ ಸತ್ಯ ಶಬ್ದವು ಉಪಯೋಗಿಸಲ್ಪಟ್ಟಿದೆ. ಉದಾಹರಣಾರ್ಥ: ಹರಿಶ್ಚಂದ್ರನ ಅಥವಾ ರಾಮ ಚಂದ್ರನ ಕತೆಯು ಕೇವಲ ಕಾಲ್ಪನಿಕವಿರಬಹುದು. ಆದರೆ ಅದರೊಳಗಿನ

ಸಿದ್ಧಾಂತಗಳು ಮತ್ತು ಗುರಿಗಳು ಸತ್ಯವೂ ಹಿತಕರವೂ ಉಪಯುಕ್ತವೂ ಆಗಿರುವವು. ಆದುದರಿಂದ ಈ ಕತೆಯ ಸಾಹಿತ್ಯವು ಈ ಸತ್ಯದ ಒರೆಗಲ್ಲಿಗೆ ಹತ್ತಿ ಪಾರಾಗುವದು.

೩ ಸಂಗತಿಗಳು ಮತ್ತು ವರ್ಣನೆಗಳು ಸತ್ಯವಿರಬಹುದು, ಇದ್ದಕ್ಕಿದ್ದ ಹಾಗೆ ಚಿತ್ರವನ್ನು ನಮ್ಮೆದುರಿನಲ್ಲಿ ಇಡಬಹುದು, ಆದರೆ ಅಷ್ಟರಿಂದಲೆ ಅವು ಯೋಗ್ಯ ಸಾಹಿತ್ಯವಾಗಿದೆ, ಕಲೆಗಳಾಗಿವೆಯೆಂದು ಹೇಳಲಾಗುವದಿಲ್ಲ. ಎಷ್ಟೋ ಸಂಗತಿಗಳು ನಿಜವಿದ್ದರೂ ಅವು ಅಹಿತಕರ ಮತ್ತು ನಿರುಪಯುಕ್ತ ಇರುವವು ಅಥವಾ ಹಾನಿಕರವಿರುವವು. ಅವುಗಳನ್ನು ಜನರೆದುರಿನಲ್ಲಿ ಇಡುವಂಥ ಸಾಹಿತ್ಯವು ಮತ್ತು ಕಲೆಯು ಹಾನಿಕರವೆ ಇರುತ್ತದೆ. ಉದಾ: ವೇಶ್ಯಾಸದನಗಳ ಚಿತ್ರಗಳು, ವರ್ಣನೆಗಳು.

೪ ಎಷ್ಟೋ ಸಲ ಕೊನೆಯಲ್ಲಿ ಸತ್ಯ, ನೀತಿ, ಧರ್ಮ ಮೊದಲಾದವುಗಳೆ ಜಯ ಪಡೆದದ್ದನ್ನು ತೋರಿಸಿದರೂ ಮೊದಲು ಚಿತ್ರಿಸಲ್ಪಡುವ ಅಸತ್ಯ, ಅನೀತಿ, ಅಧರ್ಮದ ಬೀಭತ್ಸ ದೃಶ್ಯಗಳು ಜನರ ಅಧಮ ಪ್ರವೃತ್ತಿಗಳಿಗೆ ಉತ್ತೇಜನವನ್ನೀಯುವವು. ಇಂಥ ಸಾಹಿತ್ಯವು ಮತ್ತು ಕಲೆಯು ಕೂಡ ಹೇಸಿಯೆನಿಸುವದು.

## ೨ ಸಾಹಿತ್ಯದ ಶೈಲಿ

೧ ಎಷ್ಟೋ ಸಾಹಿತ್ಯವು ವಿದ್ವಾಂಸರಿಗೆ ಇಲ್ಲವೆ ಪರಂಪರೆಯಿಂದ ಅದನ್ನು ಅರಿತವರಿಗೆ ಮಾತ್ರ ತಿಳಿಯುವದು. ಇಷ್ಟು ಕಠಿಣವಿದ್ದರೂ ಅದು ಉತ್ಕೃಷ್ಟವಿರುತ್ತದೆ ಇದು ನಿಜವು. ಹೀಗಿರುವದು ಸಾಹಿತ್ಯದ ಗುಣವೆನಿಸುವದಿಲ್ಲ, ಕುಂದೆನಿಸುತ್ತದೆ. ವಿಶಿಷ್ಟ ಕಾರಣಗಳೇನಾದರೂ ಇಲ್ಲದಿದ್ದಲ್ಲಿ ಸರ್ವಸಾಧಾರಣ ಜನರಿಗೂ ಅರ್ಥವಾಗುವಂತಹ ಶೈಲಿಯನ್ನೆ, ಭಾಷೆಯನ್ನೆ ಸಾಹಿತ್ಯಕಾರನು ಉಪಯೋಗಿಸಲು ಯತ್ನಿಸಬೇಕು.

೨ ಇದಕ್ಕೆ ಅಪವಾದಗಳೂ ಉಂಟು; ಅವುಗಳಲ್ಲಿ ಕೆಲವು ಈ ರೀತಿ ಇರುವವು :

(ಕ) ಭಾಷೆಯು ಸುಲಭ ಮತ್ತು ಸುಬೋಧವಿದ್ದರೂ ಸಾಹಿತ್ಯದ ವಿಷಯವು ಹೊಸದು, ಅಸಾಧಾರಣ, ಕಠಿಣ ಮತ್ತು ಗಹನ ವಿಚಾರಗಳುಳ್ಳದ್ದು ಇದ್ದರೆ ಅದನ್ನು ಸಾಮಾನ್ಯ ಜನರು ಬಲ್ಲಿದರ ಸಹಾಯವಿಲ್ಲದೆ ತಿಳಿದುಕೊಳ್ಳಲಾರರು. ಉದಾ: ಗೀತೆಯು. ಗೀತೆಯ ಭಾಷೆಯ

ಸಾಧಾರಣ ಸಂಸ್ಕೃತ ಬಲ್ಲ ಸಾಮಾನ್ಯ ಜನರಿಗೂ ತಿಳಿಯುವಂಥದು ಇರುತ್ತದೆ. ಆದರೂ ಅದರ ತಾತ್ಪರ್ಯವು ಸಾಮಾನ್ಯ ಜನರಿಗೆ ತಿಳಿಯುವದಿಲ್ಲ. ಇದಕ್ಕಾಗಿ ವಿದ್ವಾಂಸರ ಟೀಕೆಗಳ ಸಹಾಯವನ್ನು ಕೋರಬೇಕಾಗುತ್ತದೆ. ಏಕೆಂದರೆ ಅದರ ವಿಷಯವು ಕಠಿಣವಿರುವದು, ವಿಷಯಗಳು ಗಹನವಿರುವವು. ಕೇವಲ ಸಂಸ್ಕೃತ ಭಾಷಾಜ್ಞಾನದಿಂದ ಅದನ್ನು ತಿಳಿದುಕೊಳ್ಳಲಾಗುವದಿಲ್ಲ.

(ಖ) ಇದೇ ರೀತಿ ಶಾಸ್ತ್ರೀಯ ಗ್ರಂಥಗಳೂ ಉಂಟು. ಅವುಗಳಲ್ಲಿ ಒಂದು ವಿಶಿಷ್ಟ ತರದ ಪರಿಭಾಷೆಯು ಉಪಯೋಗಿಸಲ್ಪಟ್ಟಿರುತ್ತದೆ. ಆದ್ದರಿಂದ ಅವು ಸಾಮಾನ್ಯ ಜನರಿಗೆ ತಿಳಿಯುವದಿಲ್ಲ. ಇದರಲ್ಲಿ ಆ ಗ್ರಂಥಗಳ ದೋಷವೇನೂ ಇಲ್ಲ. ಉದಾ: ತರ್ಕಶಾಸ್ತ್ರ, ಕಾನೂನು, ವೈದ್ಯಗ್ರಂಥಗಳು ಇತ್ಯಾದಿ.

(ಗ) ಮನೋರಂಜನೆಗಾಗಿ ರಚಿಸಿದ ಒಗಟುಗಳು, ಸಮಸ್ಯೆಗಳು, ಗೂಢೋಕ್ತಿಗಳು, ಕಬೀರನಂಥವರ ಗೂಢ ಕಾವ್ಯಗಳು, ತಿರುವು ಮುರುವು ವಾಕ್ಯಗಳು ಮುಂತಾದವುಗಳ ಅರ್ಥವು ವಿಶೇಷವಾಗಿ ಪರಂಪರೆಯಿಂದಲೆ ತಿಳಿಯಬಲ್ಲದು. ಇಂಥ ಸಾಹಿತ್ಯವು ಅಲ್ಪ ಪ್ರಮಾಣದಲ್ಲಿದ್ದು ಜ್ಞಾನವನ್ನು ಕೊಡುವಂಥದೂ ನಿರ್ದೋಷವಾದುದೂ ಇದ್ದರೆ ಅದನ್ನು ಯಾರೂ ವಿರೋಧಿಸುವದಿಲ್ಲ.

೩ ಮೊದಲಿನ ಎರಡು ಪ್ರಕಾರದ ಅಪವಾದಗಳಲ್ಲಿ ತೋರಿಸಿದ ಸಾಹಿತ್ಯದೊಳಗಿಂದ ಸಾಮಾನ್ಯ ಜನರಿಗೆ ಎಷ್ಟು ಆವಶ್ಯಕ ಮತ್ತು ಉಪಯೋಗಿ ಸಾಹಿತ್ಯವಿರುವದೊ ಅಷ್ಟು ಆಯ್ದುಕೊಂಡು ಅದನ್ನು ಸರಳ ಮತ್ತು ಸುಲಭವಾದ ಭಾಷೆಯಲ್ಲಿ ಬರೆಯುವದು ಆಯಾ ವಿಷಯಗಳಲ್ಲಿ ಪ್ರಾವೀಣ್ಯವನ್ನು ಸಂಪಾದಿಸಿದವರ ಕರ್ತವ್ಯವಾಗಿರುವದು.

## ೩ ಭಾಷಾಂತರಗಳು

೧ ಅನ್ಯ ಭಾಷೆಗಳಲ್ಲಿದ್ದ ಉತ್ಕೃಷ್ಟ ಸಾಹಿತ್ಯದ ಪರಿಚಯವನ್ನು ತನ್ನ ಭಾಷೆಯ ಜನರಿಗೂ ಮಾಡಿಕೊಡುವದು ಕೂಡ ಸಾಹಿತ್ಯದ ಒಂದು ಉಪಯುಕ್ತ ಅಂಗವಾಗಿರುವದು.

೨ ಉತ್ತಮ ಭಾಷಾಂತರದಲ್ಲಿ ಕೆಳಗಿನ ಗುಣಗಳಿರಬೇಕು :

(ಕ) ಸ್ವಭಾಷೆಯಲ್ಲಿಯೆ ವಿಚಾರಿಸಿ ಬರೆದಷ್ಟು ಭಾಷೆಯು ಸರಲವೂ

ಸುಬೋಧವೂ ಉತ್ತಮೋತ್ತಮ ವಾಕ್ಪ್ರಯೋಗಗಳಿಂದ ಕೂಡಿದ್ದೂ ಇರಬೇಕು. ಯಾವ ಭಾಷೆಯಿಂದ ಅನುವಾದ ಮಾಡಲ್ಪಡುವದೊ ಆ ಭಾಷೆಯಲ್ಲಿಯ ವಿಶಿಷ್ಟ ಶಬ್ದಗಳ ವಾಕ್ಪ್ರಯೋಗಗಳ ಅರ್ಥವು ತಿಳಿಯು ದಿದ್ದವರಿಗೆ ಕೂಡ ತಿಳಿಯುವಂತೆ ಅನುವಾದಿಸಬೇಕು.

(ಖ) ಇಂಥ ವಿಶಿಷ್ಟ ಶಬ್ದಗಳನ್ನು ಅಥವಾ ವಾಕ್ಪ್ರಯೋಗಗಳನ್ನು ಅನುವಾದದಲ್ಲಿ ಉಪಯೋಗಿಸಲೆಬೇಕಾದ ಪಕ್ಷದಲ್ಲಿ ಅಥವಾ ಅಪರಿಚಿತ ರೂಪಕಗಳನ್ನೂ ದೃಷ್ಟಾಂತಗಳನ್ನೂ ದಂತಕಥೆಗಳನ್ನೂ ಉಲ್ಲೇಖಿಸಲೆ ಬೇಕಾದ ಪಕ್ಷದಲ್ಲಿ ಟಿಪ್ಪಣಿಗಳಲ್ಲಿ ಅವುಗಳ ಸ್ಪಷ್ಟೀಕರಣ ಮಾಡಬೇಕು.

(ಗ) ಭಾಷಾಂತರಕಾರನು ಮೂಲ ಪುಸ್ತಕವನ್ನು ಅರೆದು ಕುಡಿದು ಹಾಗೂ ಚನ್ನಾಗಿ ಪಚನಮಾಡಿಕೊಂಡ ಬಳಿಕ ತನ್ನ ಭಾಷೆಗೆ ರೂಪಾಂತ ರಿಸಿರುವನೊ ಏನೊ ಎನ್ನುವಂತೆ ಅನುವಾದವು ಎನಿಸುತ್ತಿರಬೇಕು.

(ಘ) ಮೂಲ ಪುಸ್ತಕದ ವೈಶಿಷ್ಟ್ಯವು ಮತ್ತು ಗುಣಗಳು ಅನುವಾದ ದಲ್ಲಿ ಇಳಿಯದಿದ್ದರೆ ಅದು ಸಾಧಾರಣ ತರಗತಿಯ ಅನುವಾದವೆನಿಸು ವದು.

೩ ಆದ್ದರಿಂದ ಸ್ವತಂತ್ರ ಗ್ರಂಥರಚನೆ ಮಾಡುವದಕ್ಕಿಂತ ಅನುವಾದಿ ಸುವ ಕಾರ್ಯವು ಹಗುರಾದದ್ದಲ್ಲ. ಮೂಲ ಲೇಖಕನೊಡನೆ ಸಂಪೂರ್ಣ ಸಮ ಭಾವನೆಯನ್ನಿಡದ, ಸಮರಸನಾಗದ ಮತ್ತು ಅವನ ಮನೋಗತವನ್ನು ಗ್ರಹಿಸಲು ಅಸಮರ್ಥನಾದ ಮನುಷ್ಯನು ಅವನ ಪುಸ್ತಕವನ್ನು ಅನುವಾದಿಸ ಬಾರದು.

೪ ಭಾಷಾಂತರ ಮಾಡುವಾಗಲೂ ನಾನಾ ಬಗೆಯ ವಿಚಾರಗಳನ್ನು ಮಾಡಬೇಕಾಗುವದು, ವಿವೇಕವನ್ನುಪಯೋಗಿಸಬೇಕಾಗುವದು. ಎಷ್ಟೋ ಪುಸ್ತಕಗಳನ್ನು ಅಕ್ಷರಶಃ ಅನುವಾದಿಸುವದು ಅವಶ್ಯವೆನಿಸುವದು; ಎಷ್ಟೋ ಪುಸ್ತಕಗಳ ಸಾರವನ್ನು ತೆಗೆದರೆ ಸಾಕೆನಿಸುವದು; ಎಷ್ಟೋ ಪುಸ್ತಕಗಳ ಭಾಷಾಂತರಗಳನ್ನು ತಮ್ಮ ಸಮಾಜಕ್ಕೆ ತಿಳಿಯುವಂತೆ ವೇಷಾಂತರ ಮಾಡಿ ಕೊಡಬೇಕು; ಎಷ್ಟೋ ಪುಸ್ತಕಗಳು ಅತ್ಯಂತ ಉತ್ಕೃಷ್ಟವಾಗಿದ್ದರೂ ನಮ್ಮ ಸಮಾಜವು ಅದರಲ್ಲಿನ ಸಮಾಜಕ್ಕಿಂತ ತೀರ ಭಿನ್ನವಾಗಿದ್ದರಿಂದ ಅವುಗಳ ಭಾಷಾಂತರವು ನಮಗೆ ಬೇಕಾಗಿರುವದೆ ಇಲ್ಲ ಮತ್ತು ಎಷ್ಟೋ ಪುಸ್ತಕ ಗಳನ್ನು ಅಕ್ಷರಶಃ ಭಾಷಾಂತರಿಸುವದಲ್ಲದೆ ಅದರ ಸಾರಾಂಶವನ್ನು ಅನು- ವಾದಿಸುವದೂ ಎಷ್ಟೋ ಸಲ ಅವಶ್ಯವೆನಿಸುವದು.

## ೪ ಶುದ್ಧ ಲೇಖನ

೧ ಭಾಷೆಯ ವೃದ್ಧಿಯೊಡನೆಯೆ ವ್ಯಾಕರಣದ ಹಾಗೂ ಶುದ್ಧ ಲೇಖನದ ನಿಯಮಗಳು ಸ್ವಲ್ಪ ಹೆಚ್ಚುಕಡಿಮೆ ಬದಲಾಗುತಿರುವದು ಸ್ವಾಭಾವಿಕ. ಆದರೂ ಸಾಮಾನ್ಯ ವ್ಯವಹಾರದಲ್ಲಿ ಉಪಯೋಗಿಸಲಾಗುತಿರುವ ಶಬ್ದಗಳ ವ್ಯಾಕರಣದ ಮತ್ತು ಶುದ್ಧ ಲೇಖನದ ನಿಯಮಗಳು ನಿಶ್ಚಿತವಾಗುವದು ಅವಶ್ಯ.

೨ ವಿರಳ ಶಬ್ದಗಳ ಶುದ್ಧ ಲೇಖನದ ಸಂಬಂಧದಲ್ಲಿ ವಿದ್ವಾಂಸರಲ್ಲಿ ಮತ ಭೇದವಿರುವ ಸಂಭವವಿದೆ. ಆದರೆ ಸರ್ವಸಾಮಾನ್ಯ ಶಬ್ದಗಳ ಶುದ್ಧ ಲೇಖನದ ಸಂಬಂಧದಲ್ಲಿ ವಿದ್ವಾಂಸರೆಲ್ಲರೂ ಒಂದೇ ಧೋರಣ ಸ್ವೀಕರಿಸಬೇಕು.

೩ ಹೀಗೆ ಶಬ್ದಗಳ ರೂಪವನ್ನು ನಿಶ್ಚಯಿಸುವಾಗ ರೂಢಿ, ಬರೆಯುವ ಮತ್ತು ಅಚ್ಚು ಹಾಕುವ ಅನುಕೂಲತೆ, ಉಚ್ಚಾರ, ವ್ಯುತ್ಪತ್ತಿ, ವ್ಯಾಕರಣದ ನಿಯಮ ಇತ್ಯಾದಿ ವಿಷಯಗಳತ್ತ ಲಕ್ಷಗೊಡಲಿಕ್ಕೆಬೇಕಾಗುವದು. ಹಲವೊಂದು ಶಬ್ದದ ಸಂದರ್ಭದಲ್ಲಿ ಹಲವೊಂದು ವಿಷಯದತ್ತ ಲಕ್ಷಗೊಡಬೇಕಾದೀತು. ಏನೇ ಇದ್ದರೂ ಸಾಮಾನ್ಯ ಜನರಿಗೆ ಗೊಂದಲವಾಗದಂತೆ ಶಬ್ದಗಳ ರೂಪಗಳು ನಿಶ್ಚಯಿಸಲ್ಪಡಬೇಕು ಮತ್ತು ಎಲ್ಲರಿಗೂ ಶುದ್ಧ ಲೇಖನವು ಸರಳ ಮತ್ತು ಸುಲಭವಾಗಬೇಕು.

## ೫ ವೃತ್ತಪತ್ರಿಕೆಗಳು

೧ ವರ್ತಮಾನಪತ್ರ, ಮಾಸಪತ್ರಿಕೆ ಮುಂತಾದವುಗಳು ಕೂಡ ಸಾಹಿತ್ಯದ ಅಂಗಗಳು. ಸಾಮಾನ್ಯ ಜನತೆಯಲ್ಲಿ ವಿದ್ಯಾಪ್ರಸಾರ ಮಾಡುವದಕ್ಕೆ ಇವು ಅತ್ಯಂತ ಬಲವಾದ ಸಾಧನಗಳಿರುವವು.

೨ ಆದರೆ ಈಗ ಈ ಸಾಧನಗಳ ದುರುಪಯೋಗವು ಬಹಳವಾಗಿದೆ. ಜನತೆಗೆ ನಿಜವಾದ ಸುದ್ದಿಗಳನ್ನು, ನಿಜವಾದ ಜ್ಞಾನವನ್ನು, ನಿಜವಾದ ಸಲಹೆಯನ್ನು ಕೊಡುವದರ ಬದಲು ಬುದ್ಧಿಪೂರ್ವಕವಾಗಿ ಸುಳ್ಳು, ಅರ್ಧಸತ್ಯ, ಅರ್ಧಸುಳ್ಳು, ಅಪೂರ್ಣ ಅಥವಾ ನಿಜವಾದ ಸಮಾಚಾರವನ್ನು ತಪ್ಪುಗ್ರಹಿಕೆಯಾಗುವಂತೆ ಕೊಟ್ಟು ಜನತೆಯನ್ನು ಅಡ್ಡದಾರಿಗೆ ಒಯ್ಯುವ ಕಾರ್ಯವು ವೃತ್ತಪತ್ರಿಕೆಗಳಿಂದ ಪದ್ಧತಿಪೂರ್ವಕವಾಗಿ ಶಿಸ್ತಿನಿಂದ ಆಗುತ್ತಿರುವದು.

೩ ಇವು ಪ್ರಕಟನೆಗಳಿಂದ ಹಣ ಗಳಿಸಬೇಕೆಂಬ ಆಶೆಯಿಂದ ಅನೇಕ

ಪ್ರಕಾರದ ಸುಳ್ಳು ಸಂಗತಿಗಳನ್ನು ಅನೀತಿಯನ್ನು ಹರಡುವ ಸಾಧನಗಳಾಗಿವೆ.

೪ ಓದುವ ಅಭ್ಯಾಸವಿದ್ದ ಮನುಷ್ಯನಿಗೆ ಬಿಡುವು ದೊರೆತು ಅದನ್ನು ಹರಟೆಯಲ್ಲಿ ಪ್ರತ್ಯಕ್ಷವಾಗಿ ಕಳೆಯಲು ಸಂಗಡಿಗರು ಇಲ್ಲದಿದ್ದರೆ ಬೇಜಾರವು ಬರುವದು. ಅವನು ಬೇಜಾರವನ್ನು ಬರಗೊಟ್ಟರೂ ಚಿಂತೆಯಿಲ್ಲ. ಸ್ವಲ್ಪ ಸಮಯ ಬೇಜಾರದಲ್ಲಿಯೆ ಬಿದ್ದುಕೊಂಡು ಬಳಿಕ ಯಾವದಾದರೂ ಒಂದು ಕೆಲಸವನ್ನು ಹುಡುಕಿಕೊಂಡು ಅದರಲ್ಲಿ ತೊಡಗಬಹುದು, ಅದು ಒಳಿತು. ಆದರೆ ಕೇವಲ ಬಿಡುವಿನ ಸಮಯುವನ್ನು ನಷ್ಟಮಾಡುವ ಇಚ್ಛೆಯಿಂದಲೆ ಹುಟ್ಟಿದ, ಪ್ರಸಿದ್ಧಿಸಲ್ಪಟ್ಟ ಪತ್ರ, ಮಾಸಿಕಪತ್ರ ಅಥವಾ ಕತೆ - ಕಾದಂಬರಿಗಳನ್ನು ಓದುತ್ತ ಕುಳಿತರೆ ಮನೋರಂಜನೆಯಾಯಿತೆಂದು ಆಭಾಸವಾಗುವದು. ಆದರೆ ಅವನು ಹೆಚ್ಚು ಸಮಯವನ್ನು ಅಪ್ರತ್ಯಕ್ಷವಾಗಿ ಹರಟೆ ಎಂದರೆ ಆಲಸ್ಯದಲ್ಲಿ ಕಳೆದಂತಾಗುವದು ಅಲ್ಲದೆ ತನ್ನ ಮನಸಿನಲ್ಲಿ ಅನೇಕ ಹೀನ ಭಾವನೆಗಳನ್ನು ತುಂಬಿಕೊಳ್ಳುವನು ಮತ್ತು ಕುಸಂಸ್ಕಾರಗಳನ್ನು ಬೆಳೆಸಿಕೊಳ್ಳುವನು. ಪತ್ರಿಕೆ, ಮಾಸಪತ್ರಿಕೆ ಮತ್ತು ಕಾದಂಬರಿಗಳಿಂದ ಎಷ್ಟೋ ಯುವಕ - ಯುವತಿಯರು ವಿಕಾರಗಳ ಸೆಳೆತಕ್ಕೆ ಸಿಕ್ಕಿದ ಮತ್ತು ಕುಮಾರ್ಗಗಳನ್ನು ಹಿಡಿದ ಅನೇಕ ಉದಾಹರಣೆಗಳು ನಮಗೆ ದೊರೆಯುವವು. ಇಂಥ ಸಾಹಿತ್ಯವು ಅಗ್ನಿನಾರಾಯಣನಿಗೆ ಸಮರ್ಪಿಸಲು ಯೋಗ್ಯವಾದುದು.

೫ ತನ್ನ ಸ್ವಂತದಿಂದ ಇಲ್ಲವೆ ಬೇರೆಯವರಿಂದ ದೊರೆತ ಸತ್ಯ, ಹಿತಕರ ಮತ್ತು ಉಪಯೋಗೀ ಸಂದೇಶಗಳನ್ನು ತಾನೇ ಜನತೆಗೆ ಮುಟ್ಟಿಸಬೇಕಾಗಿದೆಯೆಂದು ಯಾರಿಗೆ ಎನಿಸುವದೊ ಅವರೇ ಪತ್ರಿಕೆ, ಇಲ್ಲವೆ ಲೇಖನ ವ್ಯವಸಾಯದಲ್ಲಿ ತೊಡಗಬೇಕು. ಅವರು ಸತ್ಯಕ್ಕೆ ಅಂಟಿಕೊಂಡಿರಬೇಕು ಮತ್ತು ತಮಗೆ ವಿರುದ್ಧವಾಗಿರುವ ಆದರೆ ಸತ್ಯವಿದ್ದ ಸಂಗತಿಗಳನ್ನೂ ದೂರುಗಳನ್ನೂ ಪ್ರಸಿದ್ಧಿಸಬೇಕು ಅಲ್ಲದೆ ತಮ್ಮ ತಪ್ಪುಗಳನ್ನೂ ಮನಬಿಚ್ಚಿ ಒಪ್ಪಿಕೊಳ್ಳಬೇಕು. ಪ್ರಕಟನೆಗಳಿಂದ ತನ್ನ ವೆಚ್ಚವನ್ನು ಪೂರೈಸಿಕೊಳ್ಳಲು ಅತ್ಯಾಶೆಪಡತಕ್ಕದ್ದಲ್ಲ; ಆದರೆ ತಮ್ಮ ಉಪಯೋಗಿತೆಯನ್ನು ತೋರಿಸಿ, ಲೋಕಪ್ರಿಯತೆಯಿಂದಲೆ ವೆಚ್ಚ ಮೈಮೇಲೆ ಬರದಂಥ ಸ್ಥಿತಿಯನ್ನು ತಂದುಕೊಳ್ಳತಕ್ಕದ್ದು. ಆದ್ದರಿಂದ ವೃತ್ತಪತ್ರಿಕೆಗಳು ಕೇವಲ ಹಿಡಿತುಂಬ ಜನರ ಆವಶ್ಯಕತೆಗಳನ್ನು, ಕೊರತೆಗಳನ್ನು ಚರ್ಚಿಸುವಂಥವುಗಳು ಇರದೆ ಸಮಸ್ತ ಜನತೆಯ ಆವಶ್ಯಕತೆ, ಕೊರತೆ, ಸುಖದುಃಖಗಳನ್ನು ಕುರಿತು ಚರ್ಚಿಸತಕ್ಕಂಥವುಗಳಾಗಿರತಕ್ಕದ್ದು.

## ೬ ಕಲೆ

೧ ಸೃಷ್ಟಿಯ ಸೌಂದರ್ಯದ ಎದುರಿನಲ್ಲಿ ಮನುಷ್ಯನಿರ್ಮಿತ ಸರ್ವ ಕಲೆಗಳ ಸೌಂದರ್ಯವು ತುಚ್ಛವಿರುವದು. ಆಕಾಶ ಮತ್ತು ಪೃಥ್ವಿಯ ಸೌಂದರ್ಯವು ಕಲಾಪ್ರಿಯರಿಗೆ ಸಾಕಷ್ಟು ಆನಂದವನ್ನೀಯಬಲ್ಲದು. ಈ ಕಲೆಯ ಆನಂದ ವನ್ನು ಅನುಭವಿಸಲಾರದ ಮನುಷ್ಯನು ಒಂದು ವೇಳೆ ತಾನು ಮಾನವನಿರ್ಮಿತ ಕಲಾಪ್ರೇಮಿಯೆಂದು ಭಾವಿಸಿದರೆ ಮೋಹಕ ದೃಶ್ಯಗಳೆ ಕಲೆಯೆಂದು ಅವನು ತಿಳಿದುಕೊಳ್ಳುವಂಥವನಿರಬಹುದು. ನಿಜವಾದ ಕಲೆಯ ಜ್ಞಾನವೆ ಅವನಿಗೆ ಇರಲಿಕ್ಕಿಲ್ಲ.

೨ ನಿಜವಾದ ಕಲೆಯು ಉತ್ಕೃಷ್ಟ ಸಾಹಿತ್ಯದಂತೆ ವಿಚಾರಗಳನ್ನು ಮಂಡಿಸುವ ಸಾಧನವು; ಸಾಹಿತ್ಯಶೈಲಿಯನ್ನು ಕುರಿತು ಯಾವ ವಿಚಾರ ಗಳನ್ನು ಹಿಂದೆ ಹೇಳಲಾಗಿದೆಯೊ ಅವೇ ಹೆಚ್ಚುಕಡಿಮೆಯಾಗಿ ಕಲೆಗೂ ಅನ್ವಯಿಸುವವು.

೩ ನೀತಿ, ಕಲ್ಯಾಣ, ಉಪಯೋಗಿತೆಗಳೊಡನೆ ಕಲೆಯ ಸಂಬಂಧವಿಲ್ಲ, ಕೇವಲ ಸೌಂದರ್ಯದೊಡನೆ ಕಲೆಯ ಸಂಬಂಧವಿರುವದೆಂದು ಯಾರಾದರೂ ಅಂದರೆ ಸೌಂದರ್ಯವನ್ನು ಹಾಗೆಯೆ ಕಲೆಯನ್ನು ಅರಿತುಕೊಳ್ಳುವ ಶಕ್ತಿಯು ತನ್ನಲ್ಲಿ ಇಲ್ಲವೆಂಬದನ್ನು ಒಪ್ಪಿಕೊಂಡಂತೆಯೆ ಸೈ. ಸತ್ಯವೇ ಉಚ್ಚತಮ ವಾದ ಕಲೆಯು, ಶ್ರೇಷ್ಠ ಸೌಂದರ್ಯವು ಮತ್ತು ಅದು ನೀತಿ, ಹಿತ ಮತ್ತು ಉಪಯೋಗಿತೆಯಿಂದ ರಹಿತವಾಗಿರದು.

೪ ಆದ್ದರಿಂದ ಕಲೆಯು ಮನುಷ್ಯ - ಜೀವನೋಪಯೋಗಿ ಸಾಧನ ಸಾಮಗ್ರಿಗಳಲ್ಲಿ ಕಾಣಿಸಬೇಕು; ಆದ್ದರಿಂದ ಆ ಪದಾರ್ಥಗಳು ಕೇವಲ ಸುಂದರ ಕಾಣುವಂಥವಷ್ಟೆ ಇರಕೂಡದು, ಚನ್ನಾಗಿ ಕೆಲಸಕ್ಕೆ ಬರುವಂಥವೂ ಇರಬೇಕು.

೫ ಯಾವ ಕಲೆಗಾಗಿ ಪ್ರಾಣಿಗಳ ಮೇಲೆ ಜುಲುಮೆಯು, ಹಿಂಸೆಯು ಮುಂತಾದ್ದು ನಡೆಯುವದೊ ಆ ಕಲೆಯು ಎಷ್ಟೇ ಸುಂದರ ಕಾಣಲಿ, ಅದು ಕಲೆಯಲ್ಲ; ಅದು ಕಲಿಯು, ಯಮನು.

೬ ಯಾವ ಕಲೆಯು ಮನುಷ್ಯನ ಕೀಳು ಪ್ರವೃತ್ತಿಗಳಿಗೆ ಉತ್ತೇಜನ ವನ್ನೀಯುವದೊ ಮತ್ತು ಭೋಗದ ಇಚ್ಛೆಯನ್ನು ಇಮ್ಮಡಿಸುವದೊ ಅಂಥ ಕಲೆಯು ಕೂಡ ಹೇಸಿ ಸಾಹಿತ್ಯದಂತೆಯೆ ಹೇಸಿಯೆನಿಸುವದು.

# ತ್ರಯೋದಶ ಖಂಡ

# ಲೋಕಸೇವಕ

## ೧ ಲೋಕಸೇವಕನ ಸಾಮಾನ್ಯ ಲಕ್ಷಣಗಳು

೧ ಉಪಜೀವನಕ್ಕೋಸ್ಕರ ಯಾವದಾದರೊಂದು ಉದ್ಯೋಗವನ್ನು ಮಾಡಲೇಬೇಕೆಂದು ಜನಸೇವೆಯ ಕಾರ್ಯವನ್ನು ಸ್ವೀಕರಿಸದೆ ಯಾವನು ಪ್ರಾಮುಖ್ಯವಾಗಿ ಜನಸೇವೆಯನ್ನು ಮಾಡುವ ಅಭಿಲಾಷೆಯುಳ್ಳವನಿರು-ವನೊ ಅವನೆ ಲೋಕಸೇವಕನೆನಿಸುವನು.

೨ ತನ್ನ ಸರ್ವ ಸಮಯವನ್ನು ದೇಶಕಾರ್ಯದಲ್ಲಿ, ಜನತೆಯ ಸೇವೆಯಲ್ಲಿ ವೆಚ್ಚಮಾಡುತ್ತಿರುವದರಿಂದ ಅವನು ತನ್ನ ಉಪಜೀವಿಕೆಗೋಸ್ಕರ, ಜನತಾಸೇವೆಗೋಸ್ಕರ ಸ್ಥಾಪಿಸಲ್ಪಟ್ಟ ಸಂಸ್ಥೆಗಳಿಂದ ಸ್ವಲ್ಪ ಧನವನ್ನು ಪಡೆದುಕೊಂಡರೆ ಅದರಲ್ಲಿ ಯಾವ ದೋಷವೂ ಇಲ್ಲ. ಸೇವಾಕಾರ್ಯವು ಸುಸೂತ್ರವಾಗಿ ಸಾಗಬೇಕಾದರೆ ಇಂಥ ಲೋಕಸೇವಕರು ಅವಶ್ಯವಾಗಿ ಬೇಕೇಬೇಕಾಗುವರು.

೩ ಆದರೆ ಲೋಕಸೇವಕನ ನಿರ್ವಾಹದ ಧೋರಣೆಯು ಅನ್ಯ ಸೇವಕರ ನಿರ್ವಾಹದ ಧೋರಣೆಗಿಂತ ಭಿನ್ನವಾಗಿರಬೇಕು. ಅವನು ತನ್ನ ಆರ್ಥಿಕ ಸ್ಥಿತಿಯನ್ನು ಸುಧಾರಿಸಿಕೊಳ್ಳಬೇಕೆಂಬ ಇಚ್ಛೆಯಿಂದ ಈ ಕಾರ್ಯದಲ್ಲಿ ತೊಡಗಿ-ರುವದಿಲ್ಲ. ಆದ್ದರಿಂದ ಅವನು ತನ್ನ ಸಂಬಳವು ಹೆಚ್ಚಾಗಬೇಕೆಂದು ಬಯಸುವದಿಲ್ಲ ಮತ್ತು ತನ್ನನ್ನು ಅವಲಂಬಿಸಿದವರನ್ನು ಸಲಹುವ ಹೊಣೆಯು ಹೆಚ್ಚಾಗದಂತೆ ಆದಷ್ಟು ಎಚ್ಚರದಿಂದ ಇರುವನು. ಅವನು ತನ್ನ ಕೆಲವು ಪ್ರತ್ಯಕ್ಷ ಅಥವಾ ಭಾವೀ ಆಶೆ-ಆಕಾಂಕ್ಷೆಗಳನ್ನು ತ್ಯಜಿಸಿರುವನೆಂದು ತಿಳಿಯಬಹುದು. ಅವನು ಸ್ವಲ್ಪ ಉಳಿಸಿಕೊಳ್ಳುವ ಇಚ್ಛೆಯಿಂದ ತನ್ನ ಸಂಬಳವನ್ನು ಗೊತ್ತುಪಡಿಸಿಕೊಳ್ಳುವದಿಲ್ಲ. ಆದರೆ ಸಂಕಟಕಾಲದಲ್ಲಿ ಪರಮೇಶ್ವರನು ತನಗೆ ಸಹಾಯವನ್ನು ಮಾಡಿಯೆ ಮಾಡುವನೆಂದು ಶ್ರದ್ಧೆಯನ್ನಿಟ್ಟು-ಕೊಂಡಿರುವನು.

೪ ನಾನು ಸ್ವಲ್ಪ ತ್ಯಾಗ ಮಾಡಿರುವೆ, ಪ್ರಜರ ಸೇವಕನಾಗಿರುವೆ

ಅಥವಾ ಆಜೀವ ಸೇವಕನಾಗಿರುವೆನೆಂದು ಯಾರಿಗೆ ಕಲ್ಪನೆಯು ಇಲ್ಲವೆ ಅಭಿಮಾನವು ಇರುವದೊ ಅವನು ಲೋಕಸೇವಕನಿದ್ದರೂ ತನ್ನ ಕೀಳುತನವನ್ನು ವ್ಯಕ್ತಮಾಡುವನು.

೫ ಲೋಕಸೇವಕನು ಅತ್ಯಂತ ನಮ್ರತೆಯಿಂದ ಇರುವನು, 'ಶೂನ್ಯ' ನಾಗಿ ಇರುವನು. ಸಂಬಳವನ್ನು ತೆಗೆದುಕೊಂಡು ಇಲ್ಲವೆ ತಮ್ಮ ಉದ್ಯೋಗ ಮಾಡಿಕೊಂಡು ಉಳಿದ ಸಮಯದಲ್ಲಿ ಸೇವೆಯನ್ನು ಮಾಡುವವರಿಗಿಂತಲೂ ತಾನು ಶ್ರೇಷ್ಠನೆಂದು ಅವನು ತಿಳಿಯುವದಿಲ್ಲ ಮತ್ತು ಅವರ ಮೇಲೆ ತನ್ನ ಅಧಿಕಾರವನ್ನು ನಡೆಸಲು ಯತ್ನಿಸುವದಿಲ್ಲ.

೬ ಲೋಕಸೇವಕನು ಯಾವದಾದರೂ ಸ್ವಾರ್ಥೀ ಅಂದರೆ ಯಶ, ಅಧಿಕಾರ ಮುಂತಾದ ಮಹತ್ವಾಕಾಂಕ್ಷೆಯನ್ನು ಪೂರ್ತಿಗೊಳಿಸುವದಕ್ಕಾಗಿ ಜನತಾ ಸೇವೆಯ ಕಾರ್ಯದಲ್ಲಿ ಬೀಳತಕ್ಕದ್ದಲ್ಲ. ಧಾರ್ಮಿಕ ಭಾಷೆಯಲ್ಲಿ ಹೇಳುವದಾದರೆ ಲೋಕಸೇವೆಯ ಮುಖಾಂತರ ಈಶ್ವರೋಪಾಸನೆ ಮಾಡುವ ಇಚ್ಛೆಯಿಂದಲೂ ವ್ಯವಹಾರಿಕ ಭಾಷೆಯಲ್ಲಿ ಹೇಳುವದಾದರೆ ತನ್ನ ದೇಶಬಂಧುಗಳನ್ನು ಅಧಿಕ ಸುಖಕರವಾದ ಮಾರ್ಗಕ್ಕೆ ಹಚ್ಚಲು ತಾನು ನಿಮಿತ್ತಮಾತ್ರನಾಗಬೇಕೆಂಬ ಇಚ್ಛೆಯಿಂದಲೂ ಲೋಕಸೇವಾಕಾರ್ಯದಲ್ಲಿ ತೊಡಗಬೇಕು.

೭ ಇದರಿಂದ ಜನತೆಯ ಸೇವಕನು ತನ್ನ ಮಧುರ ಮತ್ತು ವಿನಯ ಪೂರಿತವಾದ ನಡತೆಯಿಂದ ಜನತೆಯ ಮತ್ತು ತನ್ನ ಸಂಗಡಿಗರ ಮನವನ್ನು ತನ್ನ ಕಡೆಗೆ ಸೆಳೆದುಕೊಳ್ಳುವನು; ತನ್ನ ಕಾರ್ಯಕ್ಷೇತ್ರದಲ್ಲಿ ದೊರೆತ ಯಶಸ್ಸನ್ನು ತನ್ನ ಉಳಿದ ಸಂಗಡಿಗರಿಗೆ ಕೊಡುವನು; ತನ್ನ ಸೇವೆಯ ಬಲದಿಂದಲೆ ಅವರ ಪ್ರೇಮಾದರಗಳಿಗೆ ಪಾತ್ರನಾಗುವನು.

೮ ನಿಃಸ್ವಾರ್ಥ, ನಮ್ರ, ಪ್ರಾಮಾಣಿಕ ಮತ್ತು ಸಚ್ಚರಿತ್ರೆಯುಳ್ಳ ಲೋಕಸೇವಕನು ಲೋಕಪ್ರಿಯನಾಗಿಲ್ಲವೆಂಬ ಉದಾಹರಣೆಯನ್ನು ಈ ವರೆಗೂ ನಾವು ಕಂಡಿಲ್ಲ. ಆದರೆ ಇದಕ್ಕೆ ವಿಪರೀತವಾಗಿ ಜನತೆಯ ವಿಶ್ವಾಸಕ್ಕೆ ಪಾತ್ರನಾದ ಲೋಕಸೇವಕನು ತನ್ನ ಕಾರ್ಯಕ್ಷೇತ್ರದಲ್ಲಿ ಸರ್ವಾಧಿಕಾರಿಯ ಪದವನ್ನು ಅನುಭೋಗಿಸುತ್ತಿರುವನೆಂಬ ಅನುಭವವು ಬಂದಿರುವದು. ಜನತೆಯು ಇವನು ಹೇಳಿದ್ದನ್ನು ಕೇಳುವದು. ಇವನು ಯಾರ ಅನಾದರಕ್ಕೆ ಪಾತ್ರನಾಗುವದಿಲ್ಲ ಅಥವಾ ಈರ್ಷೆಗೂ ಪಾತ್ರನಾಗುವದಿಲ್ಲ, ಅಲ್ಲದೆ ಯಾರಿಗೂ ಕಷ್ಟದಾಯಕನೆನಿಸುವದಿಲ್ಲ.

೯ ಜನತೆಯು ಅಥವಾ ಅನ್ಯ ಸಂಗಡಿಗರು ಅಥವಾ ಮುಂದಾಳುಗಳು ಅಥವಾ ಲೋಕಸೇವಕ ಮಂಡಳದ ಹೊರಗಿನ ಕಾರ್ಯಕರ್ತರು ಕೃತಘ್ನರಿರುವರೆಂದು ಮತ್ತು ಕಾರ್ಯದಲ್ಲಿ ವಿಘ್ನಸ್ವರೂಪರಿರುವರೆಂದು ಯಾವ ಲೋಕಸೇವಕನಿಗೆ ಆಗಾಗ್ಗೆ ಎನಿಸುವದೊ ಅವನು ತನ್ನಲ್ಲಿಯೆ ದೋಷವಿದೆಯೆಂದು ನಿಶ್ಚಯವಾಗಿ ತಿಳಿದುಕೊಳ್ಳಬೇಕು. ಏಕೆಂದರೆ ಜನತೆಯು ಸಾಮಾನ್ಯವಾಗಿ ಕೃತಜ್ಞವಾಗಿಯೆ ಇರುವದು. ಇಷ್ಟೇ ಅಲ್ಲ, ಅತ್ಯಂತ ಉದಾರತೆಯಿಂದ ಲೋಕಸೇವಕನಿಗೆ ಆದರ-ಸತ್ಕಾರ ಮಾಡಬೇಕೆಂಬ ಬುದ್ಧಿಯುಳ್ಳದ್ದು ಇರುವದು. ಇದು ಅನುಭವಸಿದ್ಧವಾದ ಮಾತು.

೧೦ ಜನತೆಯ ಸೇವಕನಲ್ಲಿ ಕೆಳಗಿನ ಗುಣಗಳು ಇರತಕ್ಕದ್ದು :

(ಕ) ಅವನು ಧಾರ್ಮಿಕ ಪ್ರವೃತ್ತಿಯುಳ್ಳವನಿರಬೇಕು. ಸತ್ಯಾಗ್ರಹ, ಸತ್ಕರ್ಮ, ಸದ್ವಾಣಿ ಮತ್ತು ಸದ್ವರ್ತನೆಯಲ್ಲಿ ಅವನ ಪೂರ್ಣ ವಿಶ್ವಾಸವಿರಬೇಕು. ಅವುಗಳಂತೆ ನಡೆಯುವ ಉತ್ಕಟ ಇಚ್ಛೆ, ಅದರಲ್ಲಿ ತಪ್ಪಾದರೆ ಪಶ್ಚಾತ್ತಾಪಪಡುವ ಮನಸ್ಸು ಮತ್ತು ಅವುಗಳಲ್ಲಿಯೆ ತನ್ನ ಮತ್ತು ಜನತೆಯ ಶ್ರೇಯಸ್ಸು ಇರುವದೆಂಬ ದೃಢವಾದ ನಂಬಿಕೆ ಇರಬೇಕು.

(ಖ) ಸ್ತ್ರೀಯರು ಅವನ ಹತ್ತರ ನಿರ್ಭಯದಿಂದ ಹೋಗುವಷ್ಟು ಮತ್ತು ಜನರು ಅವನ ಬಳಿ ತಮ್ಮ ಸ್ತ್ರೀಯರನ್ನು ಕಳಿಸಲು ಸಂಶಯಪಡದಷ್ಟು ಅವನ ಚರಿತ್ರೆ ಶುದ್ಧವಾಗಿರಬೇಕು, ನಿರ್ಮಲವಾಗಿರಬೇಕು.

(ಗ) ಅವನ ಆರ್ಥಿಕ ವ್ಯವಹಾರವು ಬಹಳ ಚೊಕ್ಕಟವಾಗಿರಬೇಕು. ಎಷ್ಟೋ ಜನರು ದೊಡ್ಡ ದೊಡ್ಡ ರಕಮುಗಳ ವ್ಯವಹಾರದಲ್ಲಿ ಪ್ರಾಮಾಣಿಕತನವನ್ನು ತೋರಿಸುತ್ತಾರೆ, ಆದರೆ 'ಪೈಗಳ್ಳರು' ಇರುತ್ತಾರೆ. ಎಷ್ಟೋ ಜನರು ಪೈ ಪೈ ಲೆಕ್ಕವನ್ನು ಇಡುತ್ತಾರೆ, ಆದರೆ ದೊಡ್ಡ ರಕಮುಗಳ ಲೆಕ್ಕದಲ್ಲಿ ತಗಲು ಮಾಡುತ್ತಾರೆ. ಲೋಕಸೇವಕನು ಇವೆರಡೂ ಆಕ್ಷೇಪಗಳಿಂದ ದೂರದಲ್ಲಿರಬೇಕು ಮತ್ತು ತನಗೆ ದೊರೆತ ಪೈ ಪೈ ಲೆಕ್ಕವನ್ನು ಚನ್ನಾಗಿ ಸರಿಯಾಗಿ ಇಡಬೇಕು.

(ಘ) ಅವನು ಯಾವಾಗಲೂ ಉದ್ಯೋಗಿಯಾಗಿರಬೇಕು. ಅವನು ಹರಟೆಯಲ್ಲಿ, ವ್ಯರ್ಥ ಮಾತುಗಳಲ್ಲಿ, ನಿಂದಾಸ್ತುತಿಯಲ್ಲಿ ಕಾಲಹರಣ ಮಾಡುವವನೆನಿಸಿದರೆ ಅವನಿಗೆ ಎಂದೂ ಪ್ರತಿಷ್ಠೆ, ಸನ್ಮಾನ ದೊರೆಯದು, ಅವನ ಉದ್ಯೋಗತತ್ಪರತೆ ಮತ್ತು ತಲ್ಲೀನತೆ ಜನತೆಗೆ ಉದಾಹರಣೆಯಾಗಿರಬೇಕು.

(ಚ) ಸಮಯಕ್ಕೆ ಸರಿಯಾಗಿ ಕೆಲಸ ಮಾಡುವ ಅಭ್ಯಾಸವು ಅವನಲ್ಲಿ ಅವಶ್ಯವಾಗಿ ಇರಬೇಕು. ಯಾವ ಕಾಲದಲ್ಲಿ ಯಾವ ಕೆಲಸವನ್ನು ಮಾಡುವದು ಗೊತ್ತಾಗಿರುವದೊ ಆ ಕಾಲದಲ್ಲಿ ಅದನ್ನು ಮಾಡಲು ಎಂದೂ ತಪ್ಪಬಾರದು.

(ಛ) ಅವನು ಸರಿಯಾಗಿ ನಿಯಮಪಾಲನೆಯನ್ನು ಮಾಡಬೇಕೆಂದು ಇದರ ಅರ್ಥವಾಯಿತು. ಮುಂಜಾವಿನಿಂದ ಸಂಜೆಯ ವರೆಗಿನ ಎಲ್ಲ ಕೆಲಸಗಳು ಗಡಿಯಾರದಂತೆ ಯಥಾಕ್ರಮದಿಂದ ಸಾಗುತ್ತಿರಬೇಕು.

(ಜ) ಅವನು ತನ್ನ ಸಂಸ್ಥೆಯ ಸಿದ್ಧಾಂತಗಳನ್ನು ಮತ್ತು ನಿಯಮಗಳನ್ನು, ತನ್ನ ಮೇಲಿನವರ ಆಜ್ಞೆಯನ್ನು ಮನಃಪೂರ್ವಕವಾಗಿ, ಸರಿಯಾಗಿ ಪಾಲಿಸುವವನೂ ಇರಬೇಕು. ಆಜ್ಞೆಯನ್ನು ಚನ್ನಾಗಿ ಪಾಲಿಸಲು ಅರಿಯದವನು ಆಜ್ಞೆಯನ್ನೀಯುವ ಯೋಗ್ಯತೆಯನ್ನು ಪಡೆಯಲಾರನು.

(ಝ) ಲೋಕಸೇವಕನು ದೇಹಗೇಹದ ಚಿಂತೆಯನ್ನು ಪರಮಾತ್ಮನಿಗೆ ಒಪ್ಪಿಸಿ ನಿಶ್ಚಿಂತನಾಗಿರಬೇಕು. ಲೋಕಸೇವೆಗೋಸ್ಕರ ತನ್ನ ಧನ, ಪ್ರಾಣ, ಕುಟುಂಬ, ಸುಖಾನುಕೂಲತೆಗಳು, ಸ್ವಾತಂತ್ರ್ಯ ಮೊದಲಾದವುಗಳನ್ನು ತಾನು ಮೊದಲು ಬಿಡುವ ಹೊಣೆಯನ್ನು ಹೊರಬೇಕು. ಪ್ರಸಂಗವು ಒದಗಿದಾಗ ಎಷ್ಟೇ ಸಂಕಟಗಳು ಬಂದರೂ ಅವನ್ನು ಎದುರಿಸಿ ಲೋಕಸೇವಾಕಾರ್ಯದಲ್ಲಿ ಧುಮುಕಬೇಕು.

(ಟ) ತಾನು ಮೊದಲು ಅತ್ಯಂತ ಸ್ವಚ್ಛನಾಗಿರಬೇಕು; ಅಸ್ವಚ್ಛ ಜನರೊಡನೆ ಕೂಡಿಕೊಂಡು ಕೆಲಸ ಮಾಡಲು ಮತ್ತು ಅಸ್ವಚ್ಛತೆಯನ್ನು ಹೋಗಲಾಡಿಸುವ ಕಾರ್ಯವನ್ನು ಮಾಡಲು ಅವನು ಹೇಸಬಾರದು.

(ಠ) ಲೋಕಸೇವಕನು ದಿನಾಲು ದಿನಚರಿಯನ್ನು ಬರೆಯುವ ಅಭ್ಯಾಸವನ್ನಿಡಬೇಕು. ಅದರಲ್ಲಿ ತಾನು ಮಾಡಿದ ಕಾರ್ಯಗಳನ್ನು ಸರಿಯಾಗಿ ಉಲ್ಲೇಖಿಸಬೇಕು.

(ಡ) ಪರಮಾತ್ಮನ ಸ್ಮರಣೆಯಿಂದ ದಿವಸದ ಕಾರ್ಯವನ್ನು ಪ್ರಾರಂಭಿಸಿ ರಾತ್ರಿಯಲ್ಲಿ ತಾನು ಇಡೀ ದಿನ ಮಾಡಿದ ಕಾರ್ಯಗಳನ್ನೆಲ್ಲ ನಿರೀಕ್ಷಿಸಿ ಮತ್ತು ಮನನಮಾಡಿ ಪರಮಾತ್ಮನನ್ನು ಸ್ಮರಿಸುತ್ತಾ ಮಲಗುವ ಲೋಕಸೇವಕನು ಜನತೆಯ ಸೇವೆಯನ್ನು ಮಾಡಮಾಡುತ್ತಲೆ ಶ್ರೇಯಸ್ಸನ್ನು ಹೊಂದುವನು.

(ಛ) ಇಂಥ ಸೇವಕನು ವಿಚಾರಮಾಡಿ ನೋಡಿದರೆ ತಾನು ಲೋಕಸೇವಕನು ಬ್ರಹ್ಮಚರ್ಯದಿಂದ ಇರಬೇಕಾಗುವದೆಂದು ಅವನಿಗೆ ತಿಳಿಯುವದು. ಅವನಿಗೆ ಈ ಮಾತು ಎಂದು ಮನದಟ್ಟಾಗುವದೊ ಅಂದಿನಿಂದಲೆ ಅವನು ಇತ್ತ ಹೆಜ್ಜೆಯನ್ನಿಡಲಾರಂಭಿಸುವನು

## ೨ ಗ್ರಾಮಸೇವಕನ ಕರ್ತವ್ಯಗಳು *

೧ ಗ್ರಾಮನಿವಾಸಿಗಳಿಗೆ ಸ್ವಚ್ಛತೆಯ ಶಿಕ್ಷಣವನ್ನು ಕೊಡುವದು ಗ್ರಾಮಸೇವಕನ ಮೊದಲನೆಯ ಕರ್ತವ್ಯವು. ಈ ಶಿಕ್ಷಣಪದ್ಧತಿಯಲ್ಲಿ ವ್ಯಾಖ್ಯಾನ ಮತ್ತು ಪತ್ರಿಕೆಗಳು ಉಚ್ಚ ಸ್ಥಾನವನ್ನು ಪಡೆಯುವ ಸಾಧನಗಳಿರುವದಿಲ್ಲ; ವಸ್ತುಪಾಠದಿಂದಲೆ ಈ ಶಿಕ್ಷಣವನ್ನು ಕೊಡಬೇಕು. ಈ ಕಾರ್ಯವನ್ನು ಮಾಡಲು ತಾಳ್ಮೆಯು ಬೇಕೇಬೇಕು. ಗ್ರಾಮಸೇವಕನು ಒಂದೆರಡು ದಿವಸ ಸೇವೆಯನ್ನು ಮಾಡುತ್ತಲೆ ಜನರು ತಮ್ಮ ಕೆಲಸಗಳನ್ನು ತಾವೇ ಮಾಡಿಕೊಳ್ಳಲಾರಂಭಿಸುವರೆಂದು ತಿಳಿಯಬಾರದು.

೨ ಗ್ರಾಮಸೇವಕನು ಮೊದಲು ಗ್ರಾಮನಿವಾಸಿಗಳನ್ನು ಒಂದೆಡೆ ಒಟ್ಟು ಸೇರಿಸಿ ಅವರಿಗೆ ಅವರ ಧರ್ಮವನ್ನು ತಿಳಿಸಿಕೊಡಬೇಕು. ಬಳಿಕ ಗ್ರಾಮಸೇವಕನು ಹಳ್ಳಿಯೊಳಗಿಂದಲೆ ಗುದ್ದಲಿ, ಸಲಿಕೆ, ಬುಟ್ಟಿ, ಬಕೀಟು, ಕಸಬರಿಗೆ ಮೊದಲಾದವನ್ನು ಹುಟ್ಟಿಸಿಕೊಂಡು ಸ್ವತಃ ಸ್ವಚ್ಛತೆಯ ಕಾರ್ಯವನ್ನು ಪ್ರಾರಂಭಿಸಬೇಕು.

೩ ಮಾರ್ಗಗಳನ್ನು ನಿರೀಕ್ಷಿಸಿ, ಮೊದಲು ಮಲವನ್ನು ಸಲಿಕೆಯಿಂದ ಬುಟ್ಟಿಯಲ್ಲಿ ತುಂಬಬೇಕು. ಬಳಿಕ ಮಲವು ಬಿದ್ದ ಸ್ಥಾನವನ್ನು ಹುಡಿಮಣ್ಣಿನಿಂದ ಮುಚ್ಚಬೇಕು. ಮೂತ್ರ ಬಿದ್ದ ಸ್ಥಾನವನ್ನು ಕೂಡ ಸಲಿಕೆಯಿಂದ ಕೆದರಿ ಮೂತ್ರ ಬೆರೆತ ಮಣ್ಣನ್ನು ಅದೇ ಬುಟ್ಟಿಯಲ್ಲಿ ತುಂಬಬೇಕು. ಮತ್ತು ಆ ಮೂತ್ರ ಸ್ಥಳವನ್ನು ಸುತ್ತುಮುತ್ತಲಿನ ಒಣಮಣ್ಣಿನಿಂದ ಮುಚ್ಚಬೇಕು.

೪ ಒಕ್ಕಲಿಗನಿಗೆ ಮಲವು ಬಂಗಾರದಂತಿರುವದು. ಅವನ್ನು ಹೊಲದಲ್ಲಿ ಹೂಳುವದರಿಂದ ಉತ್ತಮವಾದ ಗೊಬ್ಬರವು ತಯಾರಾಗುವದು. ಮತ್ತು ಬೆಳೆಯು ಚನ್ನಾಗಿ ಬರುವದು. ಆದ್ದರಿಂದ ಈ [illegible] ಮಾತನ್ನು ಒಕ್ಕಲಿಗನಿಗೆ ತಿಳಿಸಿಹೇಳಬೇಕು. ಹೊಲದಲ್ಲಿ ಸುಮಾರು ಒಂ[illegible] ಇಂಚು ತಗ್ಗು ತೆಗೆಯಬೇಕು. ಇದಕ್ಕೂ ಹೆಚ್ಚು ತಗ್ಗು ತೋಡಬಾರ[illegible] ಗ್ಗಿನಲ್ಲಿ ಮಲವನ್ನು

* "ಗಾಮಡಾನೀ ಮಹಾರೆ" ಲೇಖಮಾಲೆಯ ಆಧಾರ[illegible]

ಹಾಕಿ ಅದರ ಮೇಲೆ ಒಣ ಮಣ್ಣನ್ನು ಚನ್ನಾಗಿ ಹಾಕಿ ಮುಚ್ಚಬೇಕು.

೫ ಈ ರೀತಿ ಮಲದ ವ್ಯವಸ್ಥೆಯನ್ನು ಮಾಡಿದ ಬಳಿಕ ಕಸದ ವ್ಯವಸ್ಥೆಯನ್ನು ಮಾಡಬೇಕು. ಕಸವು ಎರಡು ತರದ್ದಿರುವದು : (೧) ಗೊಬ್ಬರಕ್ಕೆ ಯೋಗ್ಯವಾದುದು; ಉದಾಹರಣಾರ್ಥ ಸೆಗಣಿ, ಮೂತ್ರ, ಕಾಯಿಪಲ್ಲೆಗಳ ಕಸರು, ಎಂಜಲ ಇತ್ಯಾದಿ; (೨) ಕಟ್ಟಿಗೆಯ ತುಂಡುಗಳು, ಕಬ್ಬಿಣದ ಚೂರುಗಳು, ತಗಡಿನ ಚೂರುಗಳು, ಬಟ್ಟೆಯ ಚೂರುಚಿಂದಿಗಳು ಇತ್ಯಾದಿ.

೬ ಗೊಬ್ಬರಕ್ಕೆ ಯೋಗ್ಯವಾದ ಕಸವನ್ನು ಪ್ರತ್ಯೇಕವಾಗಿ ಒಟ್ಟುಗೂಡಿಸಬೇಕು. ಮತ್ತು ಅದನ್ನು ಹೊಲದಲ್ಲಿ ಹುಗಿಯಬೇಕು, ಇಲ್ಲವೆ ತಿಪ್ಪೆಯಲ್ಲಿ ಸಂಗ್ರಹಿಸಿಡಬೇಕು.

೭ ಎರಡನೆ ತರದ ಕಸವನ್ನು ಹುಗಿಯಬೇಕಾಗಿರುವಂಥ ಆಳುದ್ದ ತಗ್ಗಿನಲ್ಲಿ ಚಲ್ಲಬೇಕು, ತಗ್ಗು ಮುಚ್ಚಿದ ಬಳಿಕ ಅದರ ಮೇಲೆ ಸಾಕಷ್ಟು ಮಣ್ಣು ಹಾಕಿ ನೆಲಸಮ ಮಾಡಬೇಕು. ಈ ಕಸದಲ್ಲಿನ ಕಟ್ಟಿಗೆಯ ಚೂರು, ದಂತಧಾವನದ ಚೂರು, ಇದ್ದಲಿ ಇವನ್ನು ತೊಳೆದು ಒಣಗಿಸಿ ಉರವಲಕ್ಕೆ ಉಪಯೋಗಿಸಬಹುದು ಮತ್ತು ಹರಕು ಅರಿವೆಗಳನ್ನು ಮಾರಬಹುದು.

೮ ತಿಪ್ಪೆಯ ಬಳಿಯಲ್ಲಿ ಪಾಯಖಾನೆಯನ್ನು ಕಟ್ಟಿಸಬೇಕೆಂದು ಈ ಮೊದಲು (ಆರೋಗ್ಯ ಖಂಡದಲ್ಲಿ) ಸೂಚಿಸಲಾಗಿದೆ. ಈ ತರದ ವ್ಯವಸ್ಥೆಯು ಇದ್ದ ಸ್ಥಳದಲ್ಲಿ ಒಟ್ಟುಗೂಡಿದ ಮಲವನ್ನು ಉಪಯೋಗಿಸಿಕೊಳ್ಳಲು ಎಲ್ಲಿಯ ವರೆಗೆ ಒಕ್ಕಲಿಗನು ಕಲಿಯುವದಿಲ್ಲವೊ ಅಲ್ಲಿಯ ವರೆಗೆ ಗ್ರಾಮಸೇವಕನು ಮಾರ್ಗವನ್ನು ಸ್ವಚ್ಛಮಾಡುವಂತೆ ತಿಪ್ಪೆಯನ್ನೂ ಸ್ವಚ್ಛಮಾಡಬೇಕು.

೯ ಗ್ರಾಮದ ಮಾರ್ಗಗಳನ್ನು ಪಕ್ಕಾ ಮತ್ತು ಸರಿಯಾಗಿ ಮಾಡಿಸುವದರ ಸಲುವಾಗಿ ಉಪಾಯಗಳನ್ನು ಯೋಜಿಸುವ ಕಾರ್ಯವು ಗ್ರಾಮಸೇವಕನದು. ಸ್ಥಾನಿಕ ಪರಿಸ್ಥಿತಿಗೆ ಅನುಸಾರವಾಗಿ ಈ ಉಪಾಯಗಳು ಒಂದೇ ಬಗೆಯವು ಆಗಿರಲಾರವು, ಭಿನ್ನಭಿನ್ನ ತರಹದವು ಇರುತ್ತವೆ. ಈ ಕಾರ್ಯದಲ್ಲಿ ಹಳ್ಳಿಯ ವೃದ್ಧರು ಸಲಹೆಗಳನ್ನು ಕೊಟ್ಟು ನೆರವಾಗಬಹುದು.

೧೦ ಸ್ವಚ್ಛತೆಯ ಕೆಲಸವನ್ನು ತೀರಿಸಿಕೊಂಡ ಬಳಿಕ ಗ್ರಾಮಸೇವಕನು ಅವಶ್ಯಕವಿದ್ದ ಉಪಕರಣ ಮತ್ತು ಸಾಧನಗಳನ್ನು ತೆಗೆದುಕೊಂಡು ಗ್ರಾಮದಲ್ಲಿ ನಡೆಯುವ ರಾಟೆ, ಹತ್ತಿಕಾಳು ತೆಗೆಯುವ ಮತ್ತು ಹಿಂಜುವ ಕಾರ್ಯ ಮುಂತಾದವುಗಳನ್ನು ನಿರೀಕ್ಷಿಸಲು ಹೊರಡಬೇಕು. ಎಲ್ಲಿ ರಾಟೆ ಮುಂತಾದವು

ಗಳನ್ನು ಸುಧಾರಿಸುವದು, ಸರಿಪಡಿಸುವದು ಅವಶ್ಯವಿದೆಯೊ ಅಲ್ಲಿ ಸರಿಪಡಿಸ ಬೇಕು. ಮತ್ತು ಸರಿಪಡಿಸಿಕೊಳ್ಳುವದಕ್ಕೆ ಕಲಿಸಬೇಕು. ಹೊಸದಾಗಿ ಕಲಿಯಲು ಆರಂಭಿಸಿದವರಿಗೆ ಅವರ ಕೆಲಸವನ್ನು ನಿರೀಕ್ಷಿಸಿದ ಬಳಿಕ ಯೋಗ್ಯ ಸಲಹೆಗಳನ್ನು ಸೂಚನೆಗಳನ್ನು ಅವಶ್ಯ ಕಂಡರೆ ಕೊಡಬೇಕು. ಹೊಸದಾಗಿ ಕಲಿಯಬೇಕೆನ್ನುವವರಿಗೆ ಒಂದು ಪ್ರತ್ಯೇಕ ಸಮಯವನ್ನು ನಿಯಮಿಸಿ ಕಲಿಸಬೇಕು. ಆದ್ದರಿಂದ ಯಾವ ವೇಳೆಯಲ್ಲಿ ಹಳ್ಳಿಯಲ್ಲಿ ಈ ಉದ್ಯೋಗಗಳು ನಡೆಯುವವೊ ಆಗಲೆ ಈ ಉದ್ಯೋಗಗಳನ್ನು ನಿರೀಕ್ಷಿಸಲಿಕ್ಕೆ ಹೊರಡಬೇಕು.

೧೧ ನೂಲುವ, ನೇಯುವ ಮತ್ತು ಇತರ ಉದ್ಯೋಗಗಳು ಗ್ರಾಮಸೇವಕನ ಪರವಾಗಿಯೆ ನಡೆಯುತ್ತಿದ್ದರೆ ಇವುಗಳಿಗೋಸ್ಕರ ಒಂದು ಸಮಯವನ್ನು ಗೊತ್ತುಪಡಿಸಿ ಅದೇ ವೇಳೆಯಲ್ಲಿ ತನ್ನನ್ನು ಕಾಣಲು ಜನರಿಗೆ ಹೇಳಬೇಕು. ಅದೇ ಸಮಯದಲ್ಲಿ ಬರುವ ಅಭ್ಯಾಸವನ್ನು ಅವರಿಂದ ಮಾಡಿಸಬೇಕು. ಆ ವೇಳೆಯಲ್ಲಿಯೆ ಕೆಲಸವನ್ನು ಪರೀಕ್ಷಿಸಿ ಅವಶ್ಯ ಕಂಡ ಯೋಗ್ಯ ಸುಧಾರಣೆಯನ್ನು ಮಾಡುವ ಬಗ್ಗೆ ಸಲಹೆ ಸೂಚನೆಗಳನ್ನು ಕೊಡಬೇಕು.

೧೨ ದಿವಸದಲ್ಲಿ ಕನಿಷ್ಠ ಒಂದು ಸಲವಾದರೂ ಜನರಿಗೆ ಅನುಕೂಲವಿದ್ದ ಸಮಯದಲ್ಲಿ ಗ್ರಾಮದ ಜನರನ್ನೆಲ್ಲ ಒಂದು ಕಡೆ ಕೂಡಿಸಿ ಗ್ರಾಮಸೇವಕನು ಸಾಮೂಹಿಕ ಪ್ರಾರ್ಥನೆಯನ್ನು ಮಾಡಬೇಕು. ಪ್ರಾರ್ಥನೆಯು ಸರ್ವರಿಗೂ ತಿಳಿಯುವಂಥ ಭಾಷೆಯಲ್ಲಿ ಇರಬೇಕು. ಗ್ರಾಮಸೇವಕನಿಗೆ ಸಂಗೀತದ ಜ್ಞಾನವಿರುವದು ಒಳಿತು. ಒಂದು ವೇಳೆ ಅವನಿಗೆ ಸಂಗೀತದ ಜ್ಞಾನವಿರದಿದ್ದರೆ ಗ್ರಾಮದಲ್ಲಿಯೆ ಸರಿಯಾಗಿ ಹಾಡುವವರು ಯಾರಾದರೂ ಇದ್ದರೆ ಅವರಿಂದ ಭಜನೆಯ ಪದಗಳನ್ನು ಹಾಡಿಸಬೇಕು, ಪರಮಾತ್ಮನ ನಾಮಸ್ಮರಣೆಯನ್ನು ಮಾಡಿಸಬೇಕು. ಮತ್ತು ಜನರೂ ಅವನಂತೆಯೆ ಅನ್ನುವಂತೆ ಮಾಡಬೇಕು. ವಿಶೇಷವಾಗಿ ಎಲ್ಲ ಹಳ್ಳಿಗಳಲ್ಲಿ ಭಜನಮಂಡಳಗಳು ಇರುವವು. ಹೊಸ ಹೊಸ ಭಜನೆಯ ಪದಗಳನ್ನು ಕಲಿಸಿ ಅವುಗಳನ್ನು ಸಾಮೂಹಿಕ ಪ್ರಾರ್ಥನೆಯಲ್ಲಿ ಸೇರಿಸಿಕೊಂಡು ಅವುಗಳಿಂದ ಉಪಯೋಗವನ್ನು ಪಡೆಯಬೇಕು.

೧೩ ಪ್ರಾರ್ಥನೆಯು ಮುಗಿದ ನಂತರ ವರ್ತಮಾನಪತ್ರಗಳಲ್ಲಿನ ಉಪಯುಕ್ತ ಸುದ್ದಿಗಳನ್ನು, ಲೇಖಗಳನ್ನು ಓದಿ ಹೇಳಬೇಕು; ಪುಸ್ತಕಗಳನ್ನು, ಧಾರ್ಮಿಕ ಗ್ರಂಥಗಳನ್ನು ಓದಿ ಹೇಳಬೇಕು; ಒಳ್ಳೊಳ್ಳೆ ಕಥೆಗಳನ್ನು ಹೇಳಬೇಕು ಇಲ್ಲವೆ ಹೇಳಿಸಬೇಕು.

೧೪ ಗ್ರಾಮಸೇವಕನು ಕೆಳಗಿನ ಸೂಚನೆಗಳನ್ನು ನೆನಪಿನಲ್ಲಿಟ್ಟುಕೊಂಡಿರ ಬೇಕು :

(ಕ) ಗ್ರಾಮದಲ್ಲಿ ಪಕ್ಷಗಳು ಇದ್ದರೆ ಯಾವ ಪಕ್ಷದಲ್ಲಿಯೂ ಗ್ರಾಮ ಸೇವಕನು ಸೇರಕೂಡದು. ತಟಸ್ಥನಿದ್ದುಕೊಂಡು ಎಲ್ಲರ ಸೇವೆಯನ್ನು ಸಮನಾಗಿ ಮಾಡಬೇಕು, ಎಲ್ಲರೊಡನೆ ಸಮನಾದ ಮಿತ್ರತ್ವದಿಂದ ಇರ ಬೇಕು. ಶಕ್ಯವಿದ್ದರೆ ತನ್ನ ಪ್ರತಿಭೆಯಿಂದ ಆ ಪಕ್ಷಗಳನ್ನು ಮುರಿದು ಏಕೀಕರಣ ಮಾಡಲು ಯತ್ನಿಸಬೇಕು.

(ಖ) ಸಾಮಾನ್ಯವಾಗಿ ಮಿಷ್ಟಾನ್ನದ ಆಮಂತ್ರಣಗಳು ಬಂದರೆ ಸ್ವೀಕರಿಸಬಾರದು. ಗ್ರಾಮನಿವಾಸಿಗಳು ಗ್ರಾಮಸೇವಕನ ಮೇಲಿನ ಪ್ರೀತಿ ಯಿಂದ ಆ ತಮ್ಮ ಪ್ರೀತಿಯನ್ನು ವ್ಯಕ್ತಮಾಡುವದಕ್ಕಾಗಿ ಆಗಾಗ್ಗೆ ಗ್ರಾಮಸೇವಕನಿಗೆ ಆಮಂತ್ರಣವನ್ನು ಕೊಡುವರು ಮತ್ತು ಗ್ರಾಮಸೇವ ಕನು ಅವರ ಮನಸ್ಸನ್ನು ನೋಯಿಸಬಾರದೆಂದು ಆಮಂತ್ರಣವನ್ನು ಸ್ವೀಕರಿಸಲಾರಂಭಿಸುವನು. ಇದರಿಂದ ಎಷ್ಟೋ ಗ್ರಾಮಸೇವಕರು ಸ್ವಾದ ಲೋಲುಪ್ತರಾಗುತ್ತಾರೆ ಮತ್ತು ಯಾವಾಗಲೂ ಇಂಥ ಮನೆಗಳನ್ನೆ ಅವಸರಗಳನ್ನೆ ಹುಡುಕುತ್ತಿರುತ್ತಾರೆ. ಅಲ್ಲದೆ ಸ್ವತಃ ಇಂಥ ಮಿಷ್ಟಾನ್ನದ ಔತಣಗಳನ್ನು ಬೇಡಲು ಹಿಂಜರಿಯುವದಿಲ್ಲ. ಆದರೆ ಪರಿಸ್ಥಿತಿಯು ಚನ್ನಾಗಿದ್ದ ಗ್ರಾಮವಾಸಿಗಳು ಕೂಡ ಇಂಥ ಪ್ರಸಂಗಗಳಲ್ಲಿ ತಮ್ಮ ಶಕ್ತಿ ಮೀರಿ ವೆಚ್ಚಮಾಡುತ್ತಾರೆಂಬುದನ್ನು ಗ್ರಾಮಸೇವಕರು ಲಕ್ಷ್ಯದಲ್ಲಿಟ್ಟು ಕೊಳ್ಳಬೇಕು. ಗ್ರಾಮನಿವಾಸಿಗಳ ತಲೆಯ ಮೇಲೆ ಅತಿಥಿಸತ್ಕಾರದ ಭಾರವು ವಿಪರೀತವಾಗಿ ಬೀಳುತ್ತದೆ. ಆದ್ದರಿಂದ ಗ್ರಾಮಸೇವಕನು ಅತಿಥಿ ಸತ್ಕಾರವನ್ನು ಅತ್ಯಂತ ಸಾದಾರೀತಿಯಿಂದಲೆ ಮಾಡುವ ರೂಢಿಯನ್ನು ಗ್ರಾಮನಿವಾಸಿಗಳು ಆಚರಣೆಯಲ್ಲಿ ತರುವಂತೆ ಯತ್ನಿಸುವದು ಅವಶ್ಯ ವಿದೆ. ಆದ್ದರಿಂದ ಗ್ರಾಮಸೇವಕನು ಮಿಷ್ಟಾನ್ನದ ಔತಣವನ್ನು ಸ್ವೀಕರಿಸ ದಿರುವದೆ ಒಳ್ಳೆಯದು. ಒಂದು ವೇಳೆ ಇಂಥ ಔತಣವನ್ನು ಅವಶ್ಯವಾಗಿ ಸ್ವೀಕರಿಸುವಂಥ ಪ್ರಸಂಗ ಬಂದಲ್ಲಿ ಬೇರೆ ಪ್ರಸಂಗಗಳಲ್ಲಿ ಮಿಷ್ಟಾನ್ನವನ್ನು ಉಣ್ಣುತ್ತಿದ್ದರೂ ಅಲ್ಲಿ ಅದನ್ನು ತ್ಯಜಿಸಿ ಸಾದಾ ಆಹಾರವನ್ನು ಭುಂಜಿಸ ಬೇಕು.

(ಗ) ಅತ್ಯಂತ ಬಡವರ ಮನೆಯವರೂ ಇವನಿಗೋಸ್ಕರ ವಿಶೇಷ ಊಟದ ಸಿದ್ಧತೆಯಲ್ಲಿ ತೊಡಗುವ, ಶ್ರಮವಹಿಸುವ ಪ್ರಸಂಗ ಬಾರದಂತೆ

ತನ್ನ ಊಟ - ಉಡಿಗೆಯ ಅಭ್ಯಾಸವನ್ನು ಗ್ರಾಮಸೇವಕನು ಸಾದಾ ಇಟ್ಟುಕೊಂಡಿರಬೇಕು.

(ಘ) ಗ್ರಾಮಸೇವಕನು ಸಂಯಮನಪೂರ್ಣವಾದ ಮತ್ತು ತಪೋವ್ರತಮಯವಾದ ಜೀವನವನ್ನು ಕಳೆಯಬೇಕು. ಯಾರು ಗ್ರಾಮಸೇವೆಯನ್ನು ಮಾಡಬೇಕಾಗಿದೆಯೊ ಅವರ ವ್ರತೋಪವಾಸಗಳು ಗ್ರಾಮದ ಪರಿಸ್ಥಿತಿಯನ್ನು ಯೋಚಿಸಿ ಗ್ರಹಣಮಾಡಿದವುಗಳಿರಬೇಕು. ಇಲ್ಲದಿದ್ದರೆ ವ್ರತಗಳು ಸ್ವಚ್ಛಂದವಾಗಿ ಗ್ರಾಮವಾಸಿಗಳನ್ನು ತೊಂದರೆಯಲ್ಲಿ ಹಾಕುವಂಥವು ಆಗಿಬಿಡುತ್ತವೆ. ಉದಾ: ಓರ್ವ ಗ್ರಾಮಸೇವಕನು ಸಕ್ಕರೆ-ಬೆಲ್ಲವನ್ನು ತ್ಯಜಿಸಿ ಹಾಲಿಗೆ ಜೇನುತುಪ್ಪವನ್ನು ಬೇಡುವದು, ಚಹಾ ಬಿಟ್ಟು ಕಾಫಿ ಅಥವಾ ಯಾವದಾದರೂ ಮಸಾಲೆಯ ಕಷಾಯವನ್ನು ಬೇಡುವದು ಮುಂತಾದ ವ್ರತಗಳು ಮೇಲಿನ ದೋಷಗಳಿಗೆ ಪಾತ್ರವಾಗುವವು.

ಚತುರ್ದಶ ಖಂಡ

# ಸಂಸ್ಥೆಗಳು

## ೧ ಸಂಸ್ಥೆಯ ಸಫಲತೆ

೧ ಯಾವದೆ ಸಂಸ್ಥೆಯಿರಲಿ ಅದರ ಸಫಲತೆಯು ಕೆಳಗಿನ ಮಾತುಗಳನ್ನು ಅವಲಂಬಿಸಿದೆ :

(ಕ) ಸಂಸ್ಥೆಯ ಉದ್ದೇಶದಲ್ಲಿ ಅತ್ಯಂತ ಪ್ರಾಮಾಣಿಕ ನಿಷ್ಠೆ ಮತ್ತು ಆ ಉದ್ದೇಶಪೂರ್ತಿಗಾಗಿ ತಳಮಳ.

(ಖ) ಸಂಸ್ಥೆಯ ನಿಯಮಗಳ ಸ್ಥೂಲ ಪಾಲನೆಯಷ್ಟೆ ಅಲ್ಲ, ಭಾವಗಳ ಪಾಲನೆ.

(ಗ) ಸಂಸ್ಥೆಯ ಸಂಚಾಲಕ, ಸದಸ್ಯ, ಸೇವಕ ಮುಂತಾದ ಕಾರ್ಯಕರ್ತರಲ್ಲಿ ಬಂಧುಭಾವ ಮತ್ತು ಒಂದೇ ಮನಸ್ಸು.

೨ ಯಾವ ಸಂಸ್ಥೆಯಲ್ಲಿ ಈ ಮೂರು ಮಾತುಗಳಲ್ಲಿ ಒಂದಾದರೂ ಪಾಲಿಸಲ್ಪಡುವದಿಲ್ಲವೊ ಆ ಸಂಸ್ಥೆಯು ಉಳಿದ ಎಲ್ಲ ಅನುಕೂಲತೆಗಳಿದ್ದರೂ ತೇಜಸ್ವಿಯಾಗಲಾರದು.

## ೨ ಸಂಸ್ಥೆಯ ಸಂಚಾಲಕ

೧ ಸಂಸ್ಥೆಯ ಸಂಚಾಲಕನು ಸಂಸ್ಥೆಯ ಪ್ರಾಣಸ್ವರೂಪನೆಂದು ಹೇಳಬಹುದು.

೨ ಇವನು ಸಂಸ್ಥೆಯ ಉದ್ದೇಶದಲ್ಲಿಟ್ಟುಕೊಂಡ ನಿಷ್ಠೆ ಮತ್ತು ಕಳಕಳಿ, ಇವನ ನಿಯಮಪಾಲನೆ, ಉಳಿದ ಸದಸ್ಯರೊಡನೆ ಇಟ್ಟುಕೊಂಡ ವರ್ತನೆ, ಉದ್ಯೋಗಿತನ ಮೊದಲಾದವುಗಳ ಮೇಲೆಯೆ ಸಂಸ್ಥೆಯ ಸಫಲತೆಯು ಕಾಲೂರಿದೆ.

೩ ಸಂಚಾಲಕನಿಗೆ ತನ್ನ ಅಧಿಕಾರದ ಗರ್ವವುಂಟಾದರೆ ಅಥವಾ ಅವನು ಸಂಸ್ಥೆಯ ಅನ್ಯ ಸದಸ್ಯರೊಡನೆ ಅನಾದರದಿಂದ ಮತ್ತು ಅಪ್ರಸನ್ನತೆಯಿಂದ ವರ್ತಿಸಿದರೆ ಸಂಸ್ಥೆಗೆ ಹಾನಿ ತಟ್ಟುವದು.

೪ ಯಾವ ಪ್ರಕಾರವಾಗಿ ಒಳ್ಳೆಯ ಸೇನಾಪತಿಯು ನಿಯಮುಗಳ ಪಾಲನೆಯನ್ನು ಮಾಡಿಸುವಾಗ ಎಷ್ಟು ಆಗ್ರಹಿಯೂ ಕಠೋರನೂ ಇರುವನೊ ಅಲ್ಲದೆ ತನ್ನ ಸೈನಿಕರ ಪ್ರೇಮವನ್ನು ಸಂಪಾದಿಸುವ ಚಿಂತನೆಯನ್ನು ಮಾಡುವನೊ ತನ್ನ ಸೈನಿಕರ ಬಗ್ಗೆ ಅಭಿಮಾನವನ್ನು ತಾಳುವನೊ ಅದೇ ಪ್ರಕಾರವಾಗಿ ಸಂಸ್ಥೆಯ ಸಂಚಾಲಕನ ನಡತೆಯೂ ಇರಬೇಕು.

೫ ಸಂಸ್ಥೆಯ ಚಿಕ್ಕ ಚಿಕ್ಕ ವಿಷಯಗಳ ಕಡೆಗೂ ಸಂಚಾಲಕನ ದೃಷ್ಟಿಯಿರಬೇಕು. ಯಾವ ರೀತಿ ತಾಯಿಯು ಬಾಲಕನ ಸುಖದುಃಖದ ಚಿಂತನೆಯನ್ನು ಮಾಡುವಳೊ ಅದೇ ರೀತಿ ಸಂಸ್ಥೆಯ ಸಂಚಾಲಕನೂ ಸಂಸ್ಥೆಯ ಮನುಷ್ಯರ ಮತ್ತು ಪ್ರಾಣಿಗಳ ಸುಖದುಃಖಗಳ ಕಡೆ ಗಮನಕೊಡತಕ್ಕದ್ದು.

೬ ಸಂಚಾಲಕನು ಪ್ರಸಂಗಾನುಸಾರ ತನ್ನ ಅಧಿಕಾರವನ್ನು ನಡೆಸಿದರೂ ತನ್ನ ಕೈಕೆಳಗಿನವರೊಡನೆ ಸರಿಸಮಾನತೆಯ ಅಥವಾ ಗೆಳೆತನದ ಸಂಬಂಧವನ್ನಿಟ್ಟುಕೊಂಡಿರಬೇಕು. ಚಿಕ್ಕವರಲ್ಲಿ ಚಿಕ್ಕವನಿದ್ದವನು ಕೂಡ ತನ್ನ ಗೆಳೆಯನೆ ಎಂದು ತಿಳಿಯಬೇಕು. ಸಂಚಾಲಕನು ತನ್ನ ಸಂಚಾಲಕತ್ವವು ತನ್ನ ವಿಶೇಷ ಯೋಗ್ಯತೆಯಿಂದ ದೊರೆಯದೆ ತನ್ನ ಬಗ್ಗೆ ಇದ್ದ

ತನ್ನ ಸಂಗಡಿಗರ ಪಕ್ಷಪಾತದಿಂದ ಅಥವಾ ಆದರದಿಂದ ದೊರೆತಿದೆಯೆಂದು ತಿಳಿಯಬೇಕು.

೭ ಆದ್ದರಿಂದ ಸಂಚಾಲಕನು ಚಿಕ್ಕವರಲ್ಲಿ ಚಿಕ್ಕವನಾಗಿದ್ದವನ ಸೂಚನೆಯನ್ನು ಆದರದಿಂದ ಕೇಳಿಕೊಂಡು ಅದು ಸ್ವೀಕರಿಸಲು ಯೋಗ್ಯವಾದದ್ದು ಇದ್ದರೆ ಅದನ್ನು ಸ್ವೀಕರಿಸಲು ಸಿದ್ಧನಾಗಿರಬೇಕು. ಅಯೋಗ್ಯವೆನಿಸಿದರೆ ಅದರ ಅಯೋಗ್ಯತೆಯನ್ನು ತಿಳಿಸಿಕೊಡಲು ಯತ್ನಿಸಬೇಕು.

೮ ಸಂಚಾಲಕನು ಅರಗಿನ ಕಿವಿಯವನು ಆಗಿರಕೂಡದು. ಯಾರ ವಿಷಯದಲ್ಲಿಯೂ ತತ್‌ಕ್ಷಣವೆ ಪ್ರತಿಕೂಲ ಅಭಿಪ್ರಾಯವನ್ನು ಮಾಡಿಕೊಳ್ಳಬಾರದು, ಆದರೆ ಪ್ರತಿಕೂಲ ಅಭಿಪ್ರಾಯವನ್ನು ಮಾಡಿಕೊಳ್ಳುವ ಮೊದಲು ದೀರ್ಘಾಲೋಚನೆಯನ್ನು ಮಾಡಬೇಕು ಮತ್ತು ಸ್ಪಷ್ಟ ಪ್ರಮಾಣವು ದೊರೆಯದ ವರೆಗೆ ಪ್ರತಿಕೂಲ ಅಭಿಪ್ರಾಯವನ್ನು ಮಾಡಿಕೊಳ್ಳಬಾರದು.

೯ ತನ್ನ ಕೈಕೆಳಗೆ ಕೆಲಸ ಮಾಡುವವರಲ್ಲಿ ಯಾರೊಬ್ಬರ ಮೇಲೂ ವಿಶೇಷ ಪ್ರೇಮವನ್ನು ವ್ಯಕ್ತಮಾಡಬಾರದು; ಯಾರ ಪಕ್ಷವನ್ನೂ ಕಟ್ಟಬಾರದು, ಪಕ್ಷಪಾತ ಮಾಡಬಾರದು; ಒಬ್ಬನ ಅವಮಾನ ಮಾಡುವದಕ್ಕಾಗಿ ಅಥವಾ ಒಬ್ಬನ ಕೀಳುತನವನ್ನು ತೋರಿಸುವದಕ್ಕಾಗಿ ಇನ್ನೊಬ್ಬನನ್ನು ಹೊಗಳಬಾರದು.

೧೦ ಸರಿಯಾಗಿ ನಿಯಮಗಳ ಪಾಲನೆಯನ್ನು ಮಾಡಿಸುವದಕ್ಕಾಗಿ ಕಠೋರ ವರ್ತನೆಯನ್ನಿಡಬಾರದು. ಕಠೋರವಾಗಿ ನುಡಿಯಬಾರದು ಮತ್ತು ಶಿಕ್ಷೆಯನ್ನು ಕೊಡುವದು ಕೂಡ ಅವಶ್ಯವಿಲ್ಲ ಎಂದು ಅವನು ತಿಳಿದಿರಬೇಕು. ನಿಯಮಪಾಲನೆಗೆ ಕಠೋರ ವರ್ತನೆ, ನುಡಿ, ಶಿಕ್ಷೆ ಅವಶ್ಯವೆಂದು ತಿಳಿಯುವ ಸಂಚಾಲಕನು ತನ್ನ ಯೋಗ್ಯತೆಯಲ್ಲಿ ಕೊರತೆಯಿರುವದೆಂದು ತೋರಿಸಿಕೊಡುತ್ತಾನೆ.

## ೩ ಸಂಸ್ಥೆಯ ಸದಸ್ಯರು

೧ ಯಾವ ಸಂಸ್ಥೆಯ ಸದಸ್ಯರಲ್ಲಿ ಪರಸ್ಪರ ಬಂಧುಭಾವವು ಮತ್ತು ಆದರವು ಇರುವದಿಲ್ಲವೊ ಆ ಸಂಸ್ಥೆಯು ಬಹುಕಾಲದ ವರೆಗೆ ವೈಭವದಿಂದ ಬಾಳಲಾರದು. ಅದರಲ್ಲಿ ವಿಭಾಗಗಳೂ ಪಕ್ಷಗಳೂ ಉಂಟಾಗುವವು; ಅವು ತಮ್ಮ ಧ್ಯೇಯವನ್ನು ಮರೆತು ಕಲಹದಲ್ಲಿಯೆ ತೊಡಗುವವು.

೨ ಯಾವ ಸಂಸ್ಥೆಯ ಸದಸ್ಯರು ತಮ್ಮ ಮೇಲಧಿಕಾರಿಗಳ ಆಜ್ಞೆಯನ್ನು

ಹರ್ಷದಿಂದ ಪಾಲಿಸಲು ಸಿದ್ಧರಾಗುವದಿಲ್ಲವೊ ಆ ಸಂಸ್ಥೆಯು ಬಹಳ ಸಮಯದ ವರೆಗೆ ತೇಜಸ್ವಿಯಾಗಿರಲಾರದು. ಅದರಲ್ಲಿ ಆಲಸ್ಯವೂ ಸಡಿಲೂ ಹುಟ್ಟುವದು ಮತ್ತು ಸದಸ್ಯರು ಅಲಕ್ಷಿಗಳೂ ಆಗುವರು.

೩ ಸಂಚಾಲಕರು ಮತ್ತು ಸದಸ್ಯರು ಇವರುಗಳಲ್ಲಿ ಸ್ಥೂಲ ಹಾಗೂ ಮಾನಸಿಕ ಸಹಕಾರವು ಇರತಕ್ಕದ್ದು. ಸದಸ್ಯರು ಸಂಚಾಲಕನ ಇಚ್ಛೆ ಮತ್ತು ಆಜ್ಞೆಗೆ ಒಳಪಟ್ಟಿರಬೇಕೆಂದಿಷ್ಟೆ ಇದರ ತಾತ್ಪರ್ಯವಲ್ಲ. ಆದರೆ ಆ ಇಚ್ಛೆಯು ಅಥವಾ ಆಜ್ಞೆಯು ಉಚಿತವಾದುದೆಂದು ತಿಳಿಯುತ್ತಿದ್ದರೆ ಅವನು ಆಜ್ಞಾಪಿಸಿದ ಕೆಲಸವನ್ನು ತಾವೇ ಕಲ್ಪಿಸಿಕೊಂಡು ಮಾಡಲು ನಿಶ್ಚಯಿಸಿರುವರೊ ಏನೊ ಎನ್ನುವಂತೆ ನಡತೆಯನ್ನಿಡಬೇಕು.

೪ ಯಾವ ನಿಯಮ ಮತ್ತು ಆಜ್ಞೆಯ ಔಚಿತ್ಯದ ವಿಷಯದಲ್ಲಿ ಸದಸ್ಯರಿಗೆ ಸಂತೋಷ ಮತ್ತು ವಿಶ್ವಾಸವೆನಿಸುವದಿಲ್ಲವೊ ಆ ನಿಯಮ ಮತ್ತು ಆಜ್ಞೆಯ ವಿಷಯವನ್ನು ಕುರಿತು ಸಂಚಾಲಕನೊಡನೆ ಮನಬಿಚ್ಚಿ ಮಾತನಾಡಿಕೊಳ್ಳಬೇಕು. ತಮಗೆ ಎಲ್ಲಿಯ ವರೆಗೆ ವಿಶ್ವಾಸವೆನಿಸುವದಿಲ್ಲವೊ ಅಲ್ಲಿಯ ವರೆಗೆ ತಮಗೆ ವಿಶ್ವಾಸವಾಗಿದೆಯೆಂಬ ಆಭಾಸವನ್ನು ಸಂಚಾಲಕನಲ್ಲಿ ಹುಟ್ಟಿಸಗೊಡಬಾರದು.

೫ ಒಂದು ವೇಳೆ ಯಾವ ಇಂಥ ನಿಯಮವು ಅಥವಾ ಆಜ್ಞೆಯು ಸತ್ಯ ಅಥವಾ ಧರ್ಮಕ್ಕೆ ವಿರುದ್ಧವೆಂದು ಎನಿಸುವದಿಲ್ಲವೊ ಆದರೆ ಕೇವಲ ವ್ಯಾವಹಾರಿಕ ದೃಷ್ಟಿಯಿಂದ ಅಯೋಗ್ಯವೆನಿಸುವದೊ ಅಂಥ ನಿಯಮ ಅಥವಾ ಆಜ್ಞೆಯ ಯೋಗ್ಯತೆಯ ವಿಷಯದಲ್ಲಿ ವಿಶ್ವಾಸವುಂಟಾಗದಿದ್ದರೂ ಅದನ್ನು ಸದಸ್ಯನು ಪಾಲಿಸತಕ್ಕದ್ದು; ಒಂದು ವೇಳೆ ಅದು ಸತ್ಯ ಅಥವಾ ಧರ್ಮಕ್ಕೆ ವಿರುದ್ಧವಾದುದೆಂದು ಎನಿಸಿದರೆ ಅವನು ಸಂಸ್ಥೆಯನ್ನು ಬಿಡಲಿಕ್ಕೆ ಸಿದ್ಧನಾಗಬೇಕು.

೬ ಒಂದು ವೇಳೆ ನಿಯಮವು ಅಥವಾ ಆಜ್ಞೆಯು ಸತ್ಯ ಅಥವಾ ಧರ್ಮಕ್ಕೆ ವಿರುದ್ಧವಾದದ್ದು ಇರದೆ ಅದನ್ನು ಪಾಲಿಸುವದು ತನ್ನ ದೌರ್ಬಲ್ಯದ ಮೂಲಕ ಕಠಿಣವೆನಿಸಿದರೆ ಸದಸ್ಯರು ಸಂಸ್ಥೆಯ ಊರ್ಜಿತಾವಸ್ಥೆಯ ದೃಷ್ಟಿಯಿಂದ ಸಂಸ್ಥೆಯನ್ನು ಬಿಡುವದೆ ಒಳಿತೆನಿಸುವದು.

೭ ಸದಸ್ಯರಲ್ಲಿ ಪರಸ್ಪರ ಮತಭೇದವುಂಟಾದರೆ, ಯಾರಾದರೊಬ್ಬರ ನಡತೆಯ ವಿಷಯದಲ್ಲಿ ಯಾರಿಗಾದರೂ ಸಂಶಯವು ಬಂದರೆ ಮತ್ತು ಅದ

ರಿಂದ ತನಗೆ ಅಸಂತೋಷವೂ ದುಃಖವೂ ಆಗಿದ್ದರೆ, ಯಾವನಾದರೊಬ್ಬನ ಪುನಃಪ್ರವೃತ್ತಿಯ ವಿಷಯದಲ್ಲಿ ಸಂಶಯವು ಬಂದಿದ್ದರೆ ಮೊಟ್ಟಮೊದಲು ಅವರು ಆ ವ್ಯಕ್ತಿಯೊಡನೆಯೆ ಇಂಥ ಸರ್ವ ವಿಷಯದಲ್ಲೂ ಮಾತನಾಡಿ ಸಂಶಯವನ್ನು ದೂರಮಾಡಿಕೊಳ್ಳತಕ್ಕದ್ದು. ಆದರೆ ಇಷ್ಟರಿಂದಲೂ ಒಂದುವೇಳೆ ತಮ್ಮ ಸಂಶಯವು ದೂರಾಗದಿದ್ದರೆ, ಅವನ ವಿಷಯವಾಗಿ ತಮ್ಮ ಅಭಿಪ್ರಾಯವೆ ದೃಢವಾಗಿದ್ದರೆ ಮತ್ತು ಹೆಚ್ಚು ದೃಢವಾದರೆ ಅವನ ಅಥವಾ ತಮ್ಮ ಮೇಲಿನ ಅಧಿಕಾರಿಗೆ ಆ ವಿಷಯವನ್ನು ತಿಳಿಸಬೇಕು ಮತ್ತು ಈ ವಿಷಯದಲ್ಲಿ ಯೋಗ್ಯವೆನಿಸಿದ ಶಾಸನವನ್ನು ಮಾಡಲು ಮೇಲಧಿಕಾರಿಗೆ ಒಪ್ಪಿಸಿಬಿಡಬೇಕು.

೮ ಯಾವ ವ್ಯಕ್ತಿಯ ವಿಷಯದಲ್ಲಿ ಸಂಶಯವುಂಟಾಗಿರುತ್ತದೊ ಅದೇ ಮನುಷ್ಯನೊಡನೆ ಸ್ಪಷ್ಟವಾಗಿ ಮಾತನಾಡಿಕೊಳ್ಳಲು ಪ್ರಯತ್ನಿಸದೆ, ಅವನ ಮೇಲಧಿಕಾರಿಗೆ ಅಥವಾ ಉಳಿದ ಸದಸ್ಯರಿಗೆ ತಿಳಿಸದೆ ಅಥವಾ ತನ್ನ ಮೇಲಧಿಕಾರಿಗೆ ತಿಳಿಸದೆ ಕೂಡಲೆ ವರಿಷ್ಠ ಅಧಿಕಾರಿಗೆ ತಿಳಿಸುವದು ಅಯೋಗ್ಯವಾದದ್ದೆನಿಸುವದು.

೯ ತನ್ನ ಮನಸ್ಸಿನಲ್ಲಿ ಯಾವನಾದರೊಬ್ಬನ ವಿಷಯದಲ್ಲಿ ಕುಕಲ್ಪನೆ ಇದ್ದಲ್ಲಿ ಅದರ ನಿವಾರಣೆಯನ್ನು ಮಾಡಿಕೊಳ್ಳದೆ ಮನಸ್ಸಿನಲ್ಲಿಯೆ ಸಂಗ್ರಹಿಸಿ ಇಟ್ಟುಕೊಳ್ಳುವದು ಮತ್ತು ಮೇಲಧಿಕಾರಿಗೆ ತಿಳಿಸುವಂಥ ಪ್ರಸಂಗವು ಬಂದಾಗಲೂ ತಿಳಿಸದಿರುವದು ಸಂಸ್ಥೆಯಲ್ಲಿ ಹೊಲಸು ಸೇರಗೊಟ್ಟಂತೆ ಇರುವದು.

೧೦ ಯಾವ ಸಂಸ್ಥೆಯಲ್ಲಿ ಸದಸ್ಯರ ದೋಷಗಳು ಗುಪ್ತವಾಗಿಯೆ ಚರ್ಚಿಸಲ್ಪಡುತ್ತಿರುವವೊ, ಮೇಲಧಿಕಾರಿಗಳ ಕಿವಿಯ ವರೆಗೂ ಹೋಗುವದಿಲ್ಲವೊ ಮತ್ತು ಯಾರ ವಿಷಯದಲ್ಲಿ ಸಂಶಯವು ಬರುವದೊ ಅವರೊಡನೆಯೆ ಮಾತನಾಡಿ ಸಂಶಯ ಪರಿಹಾರ ಮಾಡಿಕೊಳ್ಳುವದಿಲ್ಲವೊ ಅಂಥ ಸಂಸ್ಥೆಯು ತೇಜಸ್ವಿಯಾಗಿ ಬದುಕಲಾರದು; ಅದರಲ್ಲಿ ಪಾಪ, ದುರಭಿಮಾನ, ಡಾಂಭಿಕತನ, ಅಸತ್ಯ, ನಾಚಿಗೆಗೇಡಿತನ ಮೊದಲಾದವು ಸೇರಿ ಅದನ್ನು ಕೊಂದು ಬಿಡುವವು.

## ೪ ಸಂಸ್ಥೆಯ ಆರ್ಥಿಕ ವ್ಯವಹಾರ

೧ ಯಾವುದಾದರೂ ಕಲ್ಯಾಣದ ನಿಜವಾದ ಕಾರ್ಯವು ಹಣವಿಲ್ಲದ್ದರಿಂದ ನಿಂತುಹೋಯಿತೆಂದು ಇನ್ನೂ ಕೇಳಿಲ್ಲ.

೨ ಬಂಡವಾಳವನ್ನು ಒಟ್ಟುಗೂಡಿಸಿ ಅದರ ಬಡ್ಡಿಯಿಂದಲೆ ವೆಚ್ಚವನ್ನು ಸಾಗಿಸಬೇಕೆಂಬ ಪ್ರವೃತ್ತಿಯು ಇರಬಾರದು. ಯಾವ ಸಂಸ್ಥೆಯು ಪ್ರಜರಿಗೆ ಉಪಯೋಗ ಬೀಳುವದೆಂದು ಎನಿಸುವದೊ ಅದಕ್ಕೆ, ಅದರ ನಿರ್ವಾಹಕ್ಕೆ ಹಣವು ದೊರೆಯುತ್ತಲಿರುವದೆಂದು ಸಂಸ್ಥೆಯ ಸಂಚಾಲಕರಲ್ಲಿ ದೃಢವಾದ ವಿಶ್ವಾಸವಿರಬೇಕು.

೩ ಸಂಸ್ಥೆಯ ಉಪಯೋಗಿತೆಯನ್ನು ಕುರಿತು ಜನತೆಯಲ್ಲಿ ಎಲ್ಲಿಯ ವರೆಗೆ ವಿಶ್ವಾಸವುಂಟಾಗುವದಿಲ್ಲವೊ ಅಲ್ಲಿಯ ವರೆಗೆ ಅದರ ಸಂಚಾಲಕರು ಹೆಚ್ಚು ಪರಿಶ್ರಮಪಡಬೇಕಾಗುವದು, ಇದು ನಿಜವು; ಆದರೆ ಆ ಪರಿಶ್ರಮವು ತಪಶ್ಚರ್ಯ ಮತ್ತು ಸೇವೆಯದೆ ಭಾಗವೆನಿಸುವದು.

೪ ಎಷ್ಟೋ ಸಾರೆ ಸಂಸ್ಥೆಗೆ ದ್ರವ್ಯದ ಸಹಾಯವು ಹೇರಳವಾಗಿ ದೊರೆಯುವದು. ಸಂಸ್ಥೆಯ ಬಳಿಯಲ್ಲಿದ್ದ ಧನಸಂಗ್ರಹವೆ ಎಷ್ಟೋ ಸಂಸ್ಥೆಗಳ ನಿರ್ಜೀವತೆಗೆ ಕಾರಣವಾಗುವದು. ಆದ್ದರಿಂದ ಆದರ್ಶ ಸಂಸ್ಥೆಗಳು ಧನಸಂಗ್ರಹದ ಮೋಹದಲ್ಲಿ ಬೀಳಲೇಬಾರದು.

೫ ಸಾರ್ವಜನಿಕ ಧನಸಹಾಯದಿಂದ ನಡೆಯುವ ಸಂಸ್ಥೆಗಳಲ್ಲಿ ಧನದ ಯೋಗ್ಯ ವಿನಿಯೋಗದ ವಿಷಯದಲ್ಲಿ ಲಕ್ಷ್ಯಗೊಡುತ್ತಿರುವದಿಲ್ಲವೆಂದು ಕಂಡುಬಂದಿದೆ. ಇದು ದೊಡ್ಡ ದೋಷವು. ಹಿಂದುಸ್ತಾನದಂಥ ಬಡದೇಶದ ಸೇವೆಯನ್ನು ಮಾಡುವಂಥ ಸಂಸ್ಥೆಗಳು ಅತ್ಯಂತ ಕಡಿಮೆ ವೆಚ್ಚದಿಂದ ನಡೆಯುಬೇಕು.

೬ ಸಂಸ್ಥೆಯ ಲೆಕ್ಕಪತ್ರವನ್ನು ಚನ್ನಾಗಿ ಇಡುವದರ ಕಡೆಗೆ ವಿಶೇಷ ಗಮನಕೊಡತಕ್ಕದ್ದು. ಸರಾಫೀ ಪದ್ಧತಿಯಂತೆ ಕಾಸುಕಾಸಿನ ಲೆಕ್ಕವನ್ನು ಇಡತಕ್ಕದ್ದು ಮತ್ತು ಯೋಗ್ಯ ಲೆಕ್ಕಪತ್ರ ತಪಾಸಿಗರಿಂದ ಅದರ ಲೆಕ್ಕವನ್ನು ಪರೀಕ್ಷಿಸತಕ್ಕದ್ದು.

